ಬೆಲೆ : 2 ರೂ.

# ಶೂದ್ರ

ಈ ಸಂಚಿಕೆಯಲ್ಲಿ

ಬಿ. ಸಿ. ದೇಸಾಯಿ—ಯು. ಆರ್. ಅನಂತಮೂರ್ತಿ—ಜಿ. ರಾಜಶೇಖರ್
ಪಿ. ಲಂಕೇಶ್—ಕೆ. ವಿ. ನಾರಾಯಣ—ಜಿ. ಎಸ್. ಶಿವರುದ್ರಪ್ಪ
ಎಂ. ಎ . ವ್ಯಾಸರಾವ್—ಕುಂ. ವೀರಭದ್ರಪ್ಪ—ಸಿದ್ಧರಾಮಯ್ಯ
ಶಂಕರಪಾಟೀಲ್—ವೆಂಕಟಲಕ್ಷ್ಮಿ ಬಿ. ಎಸ್.—ಎಚ್. ಎಸ್. ವೆಂಕಟೇಶ
ಮೂರ್ತಿ ಹಾಗೂ ಕನಸಿಗೊಂದು ಕಣ್ಣು



ಅರ್ಥಪೂರ್ಣ ಚಿಂತನೆಯ ದಿಕ್ಕಿನಲ್ಲಿ ಶೂದ್ರ ತಿಂಗಳ ಪತ್ರಿಕೆ

ಸಂಚಿಕೆ : 1-2 ನವೆಂಬರ್-ಡಿಸೆಂಬರ್ 1983 ಸಂಪುಟ : 9

ಸಹಾಯಕ ಸಂಪಾದಕರು : ನಿರ್ಮಲರೆಡ್ಡಿ-ಶಶಿಕಲಾ ವಸ್ತ್ರದ
ಆನಂದಮೂರ್ತಿ

ಮುಖಪುಟ : ಶಂಕರಪಾಟೀಲ ('ಸಂಬಂಧ ಮತ್ತು ವಸ್ತುಕಲ್ಪನೆ'
ಕವನ ನೋಡಿ)

ಶೂದ್ರ ಹನ್ನೊಂದನೆಯ ವರ್ಷದಲ್ಲಿ ನಡೆಯುತ್ತಿದೆ. ಅದು ಗಟ್ಟಿಯಾಗಿ ನಡೆಯಲು ನಿಮ್ಮ ಸಹಾಯ ಬೇಕು. ದಯವಿಟ್ಟು ಚಂದಾ ಕಳಿಸಿ, ನಿಮಗೆ ಪ್ರತಿವರ್ಷ ಚಂದಾ ಕಳಿಸಲು ಬೋರ್ ಆದರೆ ದಯವಿಟ್ಟು ಆಜೀವ ಚಂದಾದಾರರಾಗಿ. ಶೂದ್ರ ಬರದಿದ್ದರೆ ಪತ್ರ ಬರೆಯಿರಿ.

ಆಜೀವ ಚಂದಾ : 200 ರೂ : ನಾಲ್ಕು ಕಂತುಗಳಲ್ಲಿ
ವಾರ್ಷಿಕ ಚಂದಾ : 18 ರೂ

ಶೂದ್ರ ಶ್ರೀನಿವಾಸ್, ಸುದ್ದುಗುಂಟೇಪಾಳ್ಯ, ಡಿ. ಆರ್. ಕಾಲೇಜ್ ಅಂಚೆ,
ಬೆಂಗಳೂರು-560 029

ಶೂದ್ರಕ್ಕೆ ಹತ್ತು ವರ್ಷ ತುಂಬಿದ ನೆನಪಿಗಾಗಿ ಸಾಹಿತ್ಯ ಮತ್ತು ಧರ್ಮವನ್ನು ಕುರಿತು ನಡೆಸಿದ ಚರ್ಚೆಯನ್ನು ಪುಸ್ತಕ ರೂಪದಲ್ಲಿ ಫೆಬ್ರವರಿ ಎರಡನೇ ವಾರದಲ್ಲಿ ಬರಲಿದೆ. ಈ ಚರ್ಚೆಯಲ್ಲಿ ಭಾಗವಹಿಸಿ ಸಹಕರಿಸಿದ ಎಲ್ಲರಿಗೂ ಶೂದ್ರ ಋಣಿಯಾಗಿದೆ.

ಸಂ.

# ಸಾಹಿತ್ಯಕ ಪ್ರಕ್ರಿಯೆಯಲ್ಲಿ ವೈಚಾರಿಕತೆ

—ಬಿ. ಸಿ. ದೇಸಾಯಿ

"To the right-thinking man, to be alone and to be wrong are one and the same" —ಜೀನ್‌ಪಾಲ್ ಸಾರ್ತ್ರ

ಸಾಹಿತ್ಯಕ ಪ್ರಕ್ರಿಯೆಯಲ್ಲಿ ವೈಚಾರಿಕತೆಯ ಪಾತ್ರವೇನು ಎಂಬ ಸಮಸ್ಯೆ ಇಂದಿನ ಸಾಹಿತ್ಯಕ ಸಂದರ್ಭದಲ್ಲಿ ಇನ್ನಷ್ಟು ತುರ್ತಿನದಾಗಿದೆ. ಸಮಾಜದಲ್ಲಿನ ಯಾವುದೇ ಸ್ತರೀಯ ವಿಷಮತೆ ತೀವ್ರ ಅರಿವಿನ ಮಟ್ಟದಲ್ಲಿ, ಸ್ಫೋಟಕ ಪ್ರತಿಭಟನೆಯ ಸ್ವರೂಪದಲ್ಲಿ, ಅಲ್ಲಿ ಬದುಕುವ ಮನುಷ್ಯನನ್ನು ಬಿರುಗಾಳಿಯಾಗಿಸಿದೆ. ಇಂಥ ಸಂಕಟಗ್ರಸ್ಥ ಸಮಾಜದಲ್ಲಿನ ಸಾಹಿತ್ಯಕ ಬರವಣಿಗೆ ಕೂಡ ಪ್ರಾಕ್ಸಿಸ್ ಸ್ವರೂಪದ್ದಾಗಿರುತ್ತದೆ. ಇದಕ್ಕೆ ಹೊರತಾದ ಸಾಹಿತ್ಯವನ್ನು ವ್ಯವಸ್ಥೆಯ ಐಡಿಯಾಲಜಿ ಎಂದು ಬಗೆಯಲಾಗುತ್ತದೆ.

ಎಸ್ಟಾಬ್ಲಿಷ್‌ಮೆಂಟ್ ತನ್ನ ಹೆಗಮನಿಯಿಂದ (ಮುಂದಾಳತ್ವದ ಕ್ರಿಯೆ ಮತ್ತು ಪ್ರಕ್ರಿಯೆ) ಸೃಷ್ಟಿಸುವ ಐತಿಹಾಸಿಕ ದುರಂತವನ್ನು ಮನುಷ್ಯ ಬದುಕಿದರೂ ಅದನ್ನು ಎಲ್ಲ ಆಯಾಮಗಳಲ್ಲಿ ಇಡಿಯಾಗಿ ಗ್ರಹಿಸುವುದು ಅಷ್ಟು ಸುಲಭದ ಕೆಲಸವಲ್ಲ. (ಏಕೆಂದರೆ ಒಂದು ಕಡೆ ರಾಜಕೀಯ ಸಮಾಜದ ಕ್ಷೇತ್ರದಲ್ಲಿ ಸರ್ಕಾರ, ಮಿಲಿಟರಿ, ಪೊಲೀಸ್, ಬ್ಯೂರೊಕ್ರಸಿ, ಆಡಳಿತ ಯಂತ್ರ ಇತ್ಯಾದಿ ಸಂಸ್ಥೆಗಳ ಮುಖಾಂತರ ವ್ಯವಸ್ಥೆ ನೇರವಾಗಿ ಪ್ರಭುತ್ವವನ್ನು ಹೇರಿದರೆ, ಇನ್ನೊಂದರ ಕಡೆಗೆ ನಾಗರಿಕ ಸಮಾಜದ ಕ್ಷೇತ್ರದಲ್ಲಿ, ಕುಟುಂಬ, ಧರ್ಮ, ಶಿಕ್ಷಣ ಮುಂತಾದ ಸಂಸ್ಥೆಗಳ ಮೂಲಕ ಮನುಷ್ಯನ ಆಂತರಿಕತೆಯನ್ನೆ ಯಂತ್ರವಾದಿಸುತ್ತದೆ.

"Founding of a ruling class is equivalent to the creation of a weltansauung" —ಗ್ರಾಮ್ಸ್ಕಿ

ಬರಹಗಾರನಿಗೆ ಇತಿಹಾಸದಲ್ಲಿ 'subjectivity'ಯನ್ನು ಗುರುತಿಸಿ, ದುರಂತದ ಅನುಭವಾತ್ಮಕ ಪ್ರಕ್ರಿಯೆಯನ್ನು ಓದುಗರ ಆಂತರಿಕತೆಗೆ ತಲುಪಿಸುವ ಉದ್ದೇಶ ಇರುವುದರಿಂದ ಮೇಲೆ ನಮೂದಿಸಿದ ಸಮಸ್ಯೆ ಇನ್ನು ಜಟಿಲವಾಗಿದೆ. ಇತಿಹಾಸದ ಗಡಿಯನ್ನು ಸರಿಗಟ್ಟದ ವೈಚಾರಿಕ ಅಂಗವಿಕಲನೆ ಮತ್ತು ಅದಕ್ಕೆ ಅಡಿಪಾಯವಾಗಿರುವ

ರಿಯಾಫೈಡ್ ಪ್ರಜ್ಞೆ (structuration of inadequate consciousness—Lucien Goldman) ಯಿಂದಾಗಿ ಕನ್ನಡದಲ್ಲಿ ಸಲ್ಮಾನ ರಶ್ದಿಯ 'ಶೇಮ್', ಗುಂಟರ್ ಗ್ರಾಸನ 'ಡಾಗ್ ಈಯರ್ಸ್' ಅಥವಾ ಸೊಲ್ಜ್ ನಿತ್ಸಿನ್ನನ 'ಫಸ್ಟ್ ಸರ್ಕಲ್' ಮಟ್ಟದ ಕಾದಂಬರಿಗಳು ಇನ್ನೂ ಸೃಷ್ಟಿಯಾಗಿಲ್ಲ ಅನಿಸುತ್ತದೆ.

ನಮ್ಮಲ್ಲಿ ಬಂದಿರುವ ದಲಿತ, ಬಂಡಾಯ ಅಥವಾ ಎಡಧೋರಣೆಯಿಂದ ಕೂಡಿದ ಸಾಹಿತ್ಯ ಅನ್ಯಾಯದ, ಶೋಷಣೆಯ 'ವೈಯಕ್ತಿಕ' ಘಟನೆಗಳು ಮಾತ್ರವಾಗಿ ಇತಿಹಾಸದ ಮಟ್ಟದಲ್ಲಿನ ಅದರ ಬೃಹತ್ ವಿಸ್ತಾರವನ್ನು ಗ್ರಹಿಸದೆ ಹೋಗುತ್ತವೆ. ಇದಕ್ಕೆ ಅಪವಾದವಾಗಿರುವ ರೀತಿಯಲ್ಲಿ ಮರಾಠಿ ಭಾಷೆಯಲ್ಲಿ ಬಂದಿರುವ ಒಂದು ದಲಿತ ಕಾದಂಬರಿಯ ವೈಶಿಷ್ಟ್ಯವನ್ನು ಗಮನಿಸಿದರೆ ಮೇಲಿನ ಮಾತು ಇನ್ನಷ್ಟು ಸ್ಪಷ್ಟವಾಗಬಹುದು.

ಬಾ. ಸ. ಹಾಟಿಯವರು ಬರೆದ 'ಯುಗವಿಧಾನ' ಕಾದಂಬರಿ 1927ರಲ್ಲಿ ಕೊಂಕಣದ ಮಹಾಡ ಗ್ರಾಮದಲ್ಲಿ ನಡೆದ ಸತ್ಯಾಗ್ರಹದ ಮೂಲ ಪ್ರೇರಣೆಗಳನ್ನು ಶೋಧಿಸುವ ಉದ್ದೇಶ ಹೊಂದಿದೆ. ಈ ಗುಣದಿಂದಾಗಿಯೇ ಕಾದಂಬರಿ 1887 ರಿಂದ 1927ರ ಕಾಲುಖಂಡದಲ್ಲಿನ ಕೊಂಕಣದ ಇಡೀ ದಲಿತ ಸಮಾಜದ ಸ್ಥಿತಿ ಮಾತ್ರ ಅಲ್ಲಿನ ಸಾಮಾಜಿಕ ಶಕ್ತಿಗಳ 'ಚಲನಶೀಲತೆಯ' ಮೇಲೆ ಬೆಳಕು ಚೆಲ್ಲುತ್ತದೆ. ಒಂದು ಜನ ಚಳವಳಿ ನಾಯಿಕೊಡೆಯಂತೆ ಒಮ್ಮಿಂದೊಮ್ಮೆಲೇ ಉದಯಿಸುವುದಿಲ್ಲ. ಶೋಷಣೆಗೆ ಒಳಗಾದ ವರ್ಗದ ಅಕಾಂಕ್ಷೆಗಳ ಬಂಧಿತ ಕ್ಷಿತಿಜವನ್ನು ಸೀಳಿ ತೆಗೆಯುವ ಸಾಮಾಜಿಕ ಜಿದ್ದು, ಸಣ್ಣ ಸಣ್ಣ ಪ್ರತಿಭಟನೆಯ ರೂಪದಲ್ಲಿ ಕ್ರಮೇಣ ಬೆಳೆಯುತ್ತ ಹೋಗಿ ಮಹಾ ಪ್ರವಾಹವಾಗುವ ಐತಿಹಾಸಿಕ ಪ್ರಕ್ರಿಯೆಯಾಗಿದೆ. ಇದರದೇ ಇನ್ನೊಂದು ಮುಖ ವೆಂದರೆ ಆ ವರ್ಗದ ಪ್ರಜ್ಞೆಯ ಬೆಳವಣಿಗೆ ಒಂದಿಲ್ಲ ಒಂದು ಕಾರಣದಿಂದ ಹೊರ ಜಗತ್ತಿಗೆ, ಹೊಸ ಜ್ಞಾನಕ್ಕೆ ತೆರೆಯುವ ಸಂವಹನದ ದಾರಿಗಳು ಮುಕ್ತವಾಗುತ್ತ ಹೋಗುವ ಪರಿಸ್ಥಿತಿ. ಇದರಿಂದ ವಿಕಾಸಗೊಳ್ಳುತ್ತ ಹೋಗುವ ಪ್ರಜ್ಞೆಯ ಸ್ತರಗಳು ಮತ್ತು ಹಲವು ಪಾತಳಿಗಳ ಮೇಲೆ ಪ್ರತಿಭಟನೆಯನ್ನು ರೂಪಿಸುವ, ಸಂಘಟಿಸುವ ಹೊಸ ನೇತೃತ್ವಗಳು ಹುಟ್ಟಿಕೊಳ್ಳುತ್ತ ಹೋಗುತ್ತವೆ. ಡಾ. ಅಂಬೇಡ್ಕರ್ ಒಮ್ಮೆಲೇ ಮುಗಿಲಿನಿಂದ ಉದುರಲಿಲ್ಲ. ಮೇಲೆ ನಮೂದಿಸಿದ ಐತಿಹಾಸಿಕ ಬೆಳವಣಿಗೆಯ ಒಂದು ಹಂತದಲ್ಲಿ ರೂಪುಗೊಳ್ಳುತ್ತಾರೆ. ಇತಿಹಾಸದ ಈ ಪ್ರಕ್ರಿಯೆಯ ಮೇಲೆ 'ಯುಗ ವಿಧಾನ' ಕಾದಂಬರಿ ನಿಕ್ಕಿಯಾಗಿ ಬೆರಳು ಇಡುವುದರಿಂದ ಅದು ತುಂಬ ಮುಖ್ಯವಾಗುತ್ತದೆ.

1880ರಲ್ಲಿ ಮತ್ತು ನಂತರ ಇಡೀ ದೇಶವೇ ಸಂಕ್ರಮಣಾವಸ್ಥೆಯಲ್ಲಿತ್ತು. ದಾದಾಭಾಯಿ ನವರೋಜಿ, ಟಿಳಕ್, ಅಗರ್‌ಕರ್, ಗೋಖಲೆ, ರಾನಡೆ ಮುಂತಾದವರು

ಮನುಷ್ಯನ ಆರ್ಥಿಕ, ರಾಜಕೀಯ, ಸಾಮಾಜಿಕ ಇರುವಿನ ಹೊಸ ಅರ್ಥ ಹೇಳತೊಡಗಿದರು. ಈ ಅರ್ಥವನ್ನು 'ಜೈಲಿಸಿದ' ಪರಕೀಯ ಬ್ರಿಟಿಶ್ ಸತ್ತೆ, ಆಂತರಿಕ ಅಸ್ಪೃಶ್ಯತೆ ಬಾಲವಿವಾಹ, ಅಂಧಶ್ರದ್ಧೆಯ ಸಂಕೋಲೆಗಳನ್ನು ಒಡೆದು, ತೆಗೆದು ಹಾಕಬೇಕೆಂದು ಹೇಳತೊಡಗಿದ್ದರು.

ಇಂಥ ಕಾಲದಲ್ಲಿ ದುಷ್ಕಾಳದಿಂದಾಗಲಿ, ಭೋರ್ ರೇಲ್ವೆ ಕಟ್ಟುವ ದುಡಿಮೆ ಕಾರಣದಿಂದಾಗಿ, ಅಥವಾ ಇನ್ನಾವುದೋ ಕಾರಣದಿಂದ ಕೊಂಕಣದ ಜನರು ಹೊರ ಹೋಗತೊಡಗಿದ್ದರು; ಮುಂಬಯಿ ಮಾರಿಷಸ್‌ಕ್ಕೂ ಮುಟ್ಟಿದ್ದರು. ಹೊರಜಗತ್ತಿನ ಹೊಸ ಅರಿವಿನ ಜೊತೆಗೆ ಮರಳಿ ಬಂದಾಗ ಅವರಲ್ಲಿ ಖೋತರ (ಕೊಂಕಣದ ಮೇಲ್ಜಾತಿಯ ವತನದಾರ ವರ್ಗ) ದಬ್ಬಾಳಿಕೆ, ಶೋಷಣೆಯಿಂದ ತಮ್ಮ ಪಾಲಿಗೆ ಬರುವ ಬರಡು ಬದುಕನ್ನು ಬದಲಿಸುವ ಸಮಾಜಿಕ ಜಿದ್ದು ಒಂದಲ್ಲ ಒಂದು ರೀತಿಯಲ್ಲಿ ಬೆಳೆಯುತ್ತ ಹೋಗುತ್ತದೆ. ಹಳ್ಳಿಯ ಗುಡಿಸಿಲಿನವರೆಗೂ ಈ ಪ್ರವಾಹ ಮುಟ್ಟುತ್ತದೆ. 40 ವರ್ಷಗಳ ಕಾಲಖಂಡದಲ್ಲಿ ವಿಸ್ತರಿಸುತ್ತ ಹೋಗುವ ಈ ಐತಿಹಾಸಿಕ ಪ್ರವಾಹದಲ್ಲಿ ಈಜುವ, ತೇಲುವ ಎಲ್ಲ ಪಾತ್ರಗಳ ಪ್ರತಿಯೊಂದು ಕ್ರಿಯೆ ಪ್ರತಿಕ್ರಿಯೆ ಅತ್ಯಂತ ಮಹತ್ವದ್ದಾಗಿರುತ್ತದೆ. ಆದ್ದರಿಂದಲೇ ಇತಿಹಾಸದ ಮಟ್ಟದಲ್ಲಿ, ಈ ಪರಿಸರದ ಸಂದರ್ಭದಲ್ಲಿ ಭಾಗೂ ಎಂಬ ಪಾತ್ರ ತನ್ನ 'ಅಬ್ರೂ' ಉಳಿಸಿಕೊಳ್ಳಲು ಜೀವ ಕೊಡುವ ಘಟನೆ ಇಡೀ ಸಮಾಜದ ರಚನಾ ಕ್ರಮದ ಬಗೆಗೆ ಕುರುಡುಗಣ್ಣಿನಿಂದ (ಪುರಾಣವನ್ನು ಇತಿಹಾಸವೆಂದು) ಒಪ್ಪಿಕೊಂಡು ಬಂದ ನಮ್ಮ feeling-structure (Raymond Williams) ಅನ್ನೇ ಮುರಿಯುತ್ತದೆ.

(ನಮ್ಮ ಇರುವಿನ ಸಂದರ್ಭದಲ್ಲಿ ಒಂದು ಕಲಾಕೃತಿಯ ಅಥೆಂಟಿಕೇಶನ್ ಮಟ್ಟ ಹುಡುಕುವ ಸಣ್ಣ ಪ್ರಯತ್ನವೊಂದನ್ನು ಇಲ್ಲಿ ಮಾಡಿದ್ದೇನೆ. ಪೂರ್ತಿ ಕಾದಂಬರಿ ವಿಶ್ಲೇಷಿಸಿ ಕಲೆ ಮತ್ತು ಇತಿಹಾಸದ ನಡುವಿನ ಜಟಿಲ ಗತಿತಾರ್ಕಿಕ ಕ್ರಿಯೆಯ ವಿವರಣೆ ಇದಲ್ಲ)

ಇಂದಿನ ಮೂಲಭೂತ ವಿಗ್ರಹಗಳು ಅಮೂರ್ತ ವ್ಯವಸ್ಥೆಯ ಐಡಿಯಾಲಜಿ ಮಟ್ಟದಲ್ಲಿ ಜನಿಸುವ ಕಾರಣ ಅವುಗಳನ್ನು ವೈಯಕ್ತಿಕ ಘಟನೆ ಅಥವಾ ವೈಯುಕ್ತಿಕ ಪಾತ್ರದಲ್ಲಿ ಪ್ರತಿನಿಧಿಸುವಂತೆ ರೂಪಿಸುವುದು ಇಂದಿನ ಬರಹಗಾರನಿಗೆ ಸಮಸ್ಯೆಯಾಗಿದೆ. ವ್ಯವಸ್ಥೆ ಅನೇಕ ಸಂಸ್ಥೆಗಳಲ್ಲಿ ಅನೇಕ ಸ್ತರಗಳ ಮೇಲೆ ಬೇರೆ ಬೇರೆ ರೂಪದಲ್ಲಿ ಸಮುದಾಯದ ಸಾಮಾಜಿಕ ರಚನಾ ಕ್ರಮವಾಗಿರುವಾಗ ಅಲ್ಲಿ ಬದುಕುವ ಒಬ್ಬ ವ್ಯಕ್ತಿ ಅವನ ಆಗು ಹೋಗುಗಳು ಆ ವ್ಯವಸ್ಥೆಯ ಅಂಶ ಮಾತ್ರ ಅಭಿವ್ಯಕ್ತವಾಗುತ್ತವೆ. "....Farthest the ordinary perception of power can reach is some middle functionary"

ಖ್ಯಾತ ವಿಮರ್ಶಕ ರೇಮಂಡ್ ವಿಲಿಯಮ್ಸ್‌ನ ಈ ಮಾತುಗಳು ಇಲ್ಲಿ ಬಹಳಷ್ಟನ್ನು ಹೇಳುತ್ತವೆ. ಈ ಸಮಸ್ಯೆಯನ್ನು ಕೆಲವೇ ಬರಹಗಾರರು ತಮ್ಮದೇ ಆದ ರೀತಿಯಲ್ಲಿ ಬಗೆಹರಿಸಿಕೊಂಡಿದ್ದಾರೆ. ಸೊಲ್ಜ್‌ನಿತ್ಸಿನ್ ತನ್ನ 'ಫಸ್ಟ್ ಸರ್ಕಲ್'ದಲ್ಲಿ ಒಬ್ಬ ಸಾಮಾನ್ಯ ವ್ಯಕ್ತಿಯನ್ನು ಹಿಡಿದು ಸ್ಟಾಲಿನ್ನನ ವರೆಗಿನ ಅನೇಕ ಎತ್ತರದ ವೈಚಾರಿಕ ಮಟ್ಟದ ಪಾತ್ರಗಳ ಸೃಷ್ಟಿಯು ವ್ಯಾಪ್ತಿಯನ್ನು, ದುರಂತ ಗರ್ಭ ಐತಿಹಾಸಿಕ ಕಾಲು ಖುಡದ ಪರಿಸರದುದ್ದಕ್ಕೂ ನಿರ್ಮಿಸಿ; ಹಲವು ಆಯಾಮಗಳುಳ್ಳ ಬ್ಯೂರಾಕ್ರಸಿಯನ್ನು ಅದಕ್ಕೆ ಎದುರಾಗುವ ಸೆಣಸಾಟವನ್ನು ಅನನ್ಯವಾಗಿ ಮೂರ್ತೀಕರಿಸಿದ್ದಾನೆ. ಇನ್ನೊಂದು ಕಡೆ ಇದೇ ಸಮಸ್ಯೆಯ ಬೇರೊಂದು ಮುಖವನ್ನು ಪರಿಚಯಿಸುತ್ತ ರೇಮಂಡ್ ವಿಲಿಯಮ್ಸ್ ಬರೆದಿದ್ದಾನೆ: "ಕಾದಂಬರಿಯಲ್ಲಿ ನಾವು ಕಲಿಯಬಹುದಾದದ್ದು ಕಲ್ಪಕತೆಯ ಅಧ್ಯಾಯಗಳನ್ನು, ಬಹುಶಃ ಇತಿಹಾಸದಂತೆ ಅಥವಾ ಸಾಮಾಜಿಕ ವಿಶ್ಲೇಷಣೆಯಂತೆ ಸಂಯೋಜಿಸುವ ವಿಧಾನವನ್ನು. ಅದು ಒಂದು 'ಸಮಗ್ರ ರೂಪಸಾಧ್ಯತೆ' ಎಂದು ನಾವು ಪರಿಗಣಿಸಬೇಕಾದೀತು. ಈ ಕ್ಷಣದಲ್ಲಿ ಇದು ವಿಚಿತ್ರ ಮತ್ತು ಅಸಂಬದ್ಧ ಎನಿಸಬಹುದು. ಇದನ್ನು ಚೆನ್ನಾಗಿ ಅರಿತಿದ್ದ ಒಬ್ಬ ಲೇಖಕ ಟಾಲ್‌ಸ್ಟಾಯ್. ಅಷ್ಟೇ ಅಲ್ಲ ಅದನ್ನು ಆತ ಅನೇಕ ಬಾರಿ ಅನುಸರಿಸಿದ್ದ ಕೂಡ...(ಇಲ್ಲಿ ಗಮನಿಸಬೇಕಾದ ಸಂಗತಿ ಇಷ್ಟು : ಒಂದೂ ಅಜಮಾಸು ನಿರ್ಧಾರದ ಹುಂಬತನದಿಂದ ಇಂಥ ಸಮಸ್ಯೆಗಳಿಗೆ ಪರಿಹಾರ ಸಿಕ್ಕುವುದಿಲ್ಲ.)

ನಮ್ಮ ಸಾಹಿತ್ಯಕ ಸಂವೇದನಾಶೀಲತೆಯಲ್ಲಿನ ವೈಚಾರಿಕತೆ ಎದುರಿಸುತ್ತಿರುವ ಎರಡು ವೈಶಿಷ್ಟ್ಯಪೂರ್ಣ ತೊಡಕುಗಳನ್ನು ಹೀಗೆ ವಿವರಿಸಬಹುದೆನೋ : ಮೊದಲನೆಯದನ್ನು ತಾಕ್ಷಣಿಕ ಬಿಕ್ಕಟ್ಟು ಎನ್ನಬಹುದು. ತಾತ್ವಿಕ ಪ್ರಕ್ರಿಯೆ ಅಮೂರ್ತವಾಗಿರುವುದರಿಂದ ಒಂದು ಸಮಸ್ಯೆಯನ್ನು ಸೈದ್ಧಾಂತಿಕವಾಗಿ ಗ್ರಹಿಸುವಾಗ ಅಲ್ಲಿನ ಮೂರ್ತ ಸಾಧನಗಳ ಅಕಲನವಾಗದೆ ಇದ್ದಾಗ ಅರಿವನ್ನು ಅಪಕ್ವ ಮಟ್ಟದಲ್ಲಿ ಹರಳುಗಟ್ಟಿಸುತ್ತದೆ. ಅರಿವಿನ ಈ ನಿರ್ಧರಿತಮಟ್ಟದಲ್ಲಿ ತಾತ್ವಿಕ ಸಿದ್ಧಾಂತಗಳು ನೈಜ ಕ್ರಿಯೆಗೆ ಅವಕಾಶವನ್ನೆ ಕೊಡದೆ ಮಿಥ್‌ದ ಸ್ವರೂಪ ತಾಳುತ್ತವೆ. ("ಪೂರ್ಣತ್ವದ ನೇರಪಂಥ", ಅಪೂರ್ಣತೆಯನ್ನು ಪರಸ್ಪರ ಜಟಿಲ ಅಂತರ್ವರ್ತನೆ ಮತ್ತು ಸಾಧನೆಗಳ ನಿರಾಕರಣೆ ಎಂದು ವೈಭವಿಸುವ ಮೂಲಕ ಮಾತ್ರ ಸೃಷ್ಟಿಸಬಹುದು, ಇಂಥ ಮಿಥ್ ಅಪಾಯಕರವಾಗಿರಬಹುದಷ್ಟೇ ಎಂಬುದು ನಾಜೀವಾದದಿಂದ ಸಾಬೀತಾಗಿದೆ.

—ಇಸ್ತ್ವಾವನ್ ಮೆರ್ಝುರೋಸ್, (ಲೂಕಾಚನ ಡಯಲೆಕ್ಟಿಕ್ ಪರಿಕಲ್ಪನೆಯಲ್ಲಿ)

ಕನ್ನಡದ ಮಹತ್ವದ ಕಾದಂಬರಿಗಳಲ್ಲೊಂದಾದ "ಭಾರತಿಪುರ" ನಮ್ಮ ಇತಿಹಾಸದ ಒಂದು ಕೇಂದ್ರಗಾಮಿ ಸಮಸ್ಯೆಯನ್ನು ಗ್ರಹಿಸುತ್ತ ಶುರುವಾಗುತ್ತದೆ. ಜಾತಿ ಭೇದದ ವಿಷಮತೆಯಿಂದಾಗಿ ಸ್ತರೀಯ ಬದುಕನ್ನು ಸಾಗಿಸುವ ಒಬ್ಬ ಪ್ರಜ್ಞಾವಂತ

ವ್ಯಕ್ತಿಗೆ ತಾನು ಪ್ರೀತಿಸಿದ ಹೆಣ್ಣಿನ ಜೊತೆಗೆ ತನ್ನನ್ನು ಸತ್ವಪೂರ್ಣವಾಗಿ ತೊಡಗಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಅಥವಾ ಇಂಥ ಸ್ತರೀಯತೆಯಿಂದಾಗಿ ಮನುಷ್ಯನ ಎಲ್ಲ ಸಂಬಂಧಗಳು ವಿಕೃತವಾಗುತ್ತ ಹೋಗುತ್ತವೆ.

ಸಮಾಜದ ಬೆಳವಣಿಗೆಯ ಒಂದು ಹಂತದಲ್ಲಿನ ಅನಿವಾರ್ಯ ಅವಶ್ಯಕತೆಯಾಗಿ ಬಂದ ಶ್ರಮವಿಭಜನೆ ಧಾರ್ಮಿಕ ಆಯಾಮದಲ್ಲಿ ತಂಡು ಸಂಬಂಧಗಳ ‘ಪವಿತ್ರ ವ್ಯಾಕರಣವಾಗುವುದು ನಮ್ಮ ಇತಿಹಾಸದ ವೈಶಿಷ್ಟ್ಯವಾಗಿದೆ. ಜಾತಿ ಸಂಸ್ಥೆ ಒಂದು ಕಡೆ ಅಂತರ್ವಿವಾಹದಂಥ ರಾಚನಿಕ ನಿಯಮ, ಪಾರಂಪರಿಕ ಉದ್ಯೋಗ, ಸ್ಪರ್ಶ, ಊಟ-ವ್ಯವಹಾರಗಳ ವಿಧಿ ನಿಷೇದ ನಿಯಮಗಳಿರುವ ವರ್ತನೆಯ ಮಾದರಿಗಳನ್ನು ನಿರ್ಮಿಸುತ್ತದೆ. ಉಚ್ಚ ನೀಚ ಶ್ರೇಣಿಗಳನ್ನು ಸೃಷ್ಟಿಸುತ್ತದೆ. ಇನ್ನೊಂದು ಕಡೆಗೆ ಆಂತರಿಕವಾಗಿ ವಿಶಿಷ್ಟ ಜನಾಂಗೀಯ ಪ್ರಜಾ ವ್ಯವಸ್ಥೆ ಮತ್ತು ಜಾತಿ ಸಂಸ್ಥೆಯು ಪ್ರತಿಯೊಂದು ಮಗ್ಗುಲಿನ ಅನುಭವಕ್ಕೂ ಮೌಲ್ಯ ತೃಪ್ತಿ ನಿರ್ಮಿಸುತ್ತದೆ; ಈ ಪ್ರಕ್ರಿಯೆ ಸಾವಿರಕ್ಕೂ ಹೆಚ್ಚು ವರ್ಷಗಳಿಂದ ಹೆಚ್ಚು ಹೆಚ್ಚು ಸಂಕೀರ್ಣವಾಗಿ ಅನೇಕ ಮುಖಗಳಲ್ಲಿ ಬೆಳೆಯುತ್ತ ಬಂದಿದೆ. ಆದರೆ ಈ ಬೆಳವಣಿಗೆ (ಜೀವನದ ಸಾಧ್ಯತೆಗಳನ್ನು ಹೆಚ್ಚಿಸದ) ಸ್ಥಗಿತತೆಯ ಬೆಳವಣಿಗೆ, ಆಗಿದೆ. “ಖಚಿತವಾಗಿ ಹೇಳುವುದಾದರೆ ಸಂದಿಗ್ಧ ಇರುವುದು ಇಲ್ಲಿ ; ಹಳೆಯದು ಸಾಯುತ್ತಿದೆ ಹೊಸದೇನೂ ಹುಟ್ಟಲಾರದು, ಈ ಮಧ್ಯಂತರ ಅವಧಿಯಲ್ಲಿ ಅಸ್ವಸ್ಥೆಯ ವೈವಿಧ್ಯಮಯ ಸಂಕೇತಗಳು ಕಾಣುತ್ತವೆ.” : ಗ್ರಾಂಮ್ಸಿ (ಸೆರೆಮನೆಯ ದಿನಚರಿ), ಜಾತಿ ಸಂಸ್ಥೆಯಿಂದಾಗಿ ಜನ ಇತಿಹಾಸದ ರೋಗದ ವಿವಿಧ ಸಂಕೇತಗಳಾಗಿದ್ದಾರೆ. ಜಾತಿ ಸಂಸ್ಥೆ ಮನುಷ್ಯನ ಆಗುವಿಕೆಯನ್ನು ನಿರಾಕರಿಸಿ ಹುಟ್ಟುವಿಕೆಯನ್ನು ಸ್ವೀಕರಿಸುವುದರಿಂದ ಅವನ ಅಸ್ತಿತ್ವವನ್ನು ಸ್ಥಗಿತ ಚೌಕಟ್ಟನ್ನಾಗಿ ಪೂರ್ವ ನಿರ್ಧಾರಗೊಳಿಸುತ್ತದೆ. ಮನುಷ್ಯನ ವ್ಯಕ್ತಿತ್ವದ ಬಹುಮುಖ ವಿಕಾಸದ ಗತಿತತ್ವವನ್ನು ನಿರಾಕರಿಸಿ ಒಂದು ಕಡೆ ಅವನ ಆಂತರಿಕತೆಯನ್ನು monomania ಆಗಿಸುತ್ತದೆ. ಇನ್ನೊಂದು ಕಡೆ ಶ್ರಮಿಕ ಸೃಜನಶೀಲತೆಯನ್ನು, ಶರೀರವನ್ನು ಯಾಂತ್ರಿಕ ಗೊಂಬೆಯಾಗಿಸುತ್ತದೆ; ಜೀವನ ಪ್ರಕ್ರಿಯೆಯನ್ನು ಪುನರಾವರ್ತನೆಯ ಪಡಿಯಚ್ಚನ್ನಾಗಿಸುತ್ತದೆ. ಜಾತಿ ಸಂಸ್ಥೆ ಸ್ತರದಿಂದ ಸ್ತರಕ್ಕೆ ಸಂವಹನೆಯನ್ನು ನಿರಾಕರಿಸುವುದರಿಂದ ಖಂಡಿತ ಅರಿವಿನ, ಬಂಧಿತ ಶಕ್ತಿಯ ಸುಳ್ಳು ಪಾತ್ರಗಳ ನಾಟಕವೆಂದರೇ ಇತಿಹಾಸವೆಂದು ‘ಮಿಥ್’ನ್ನು ಹಬ್ಬಿಸಿರುತ್ತದೆ.

ಜಾತಿಯತೆಯಿಂದಾಗಿ ಸಂಸ್ಕೃತಿಯ ಮೇಲಿನ ಸ್ತರದಲ್ಲಿ ಬದುಕುವ ಮತ್ತು ಕೆಳಗಿನ ಸ್ತರದಲ್ಲಿ ಬದುಕುವ ಜನರ ನಡುವೆ ಗತಿತಾರ್ಕಿಕ (unity of opposites) ಸಂಬಂಧವಿದೆ. ಈ ಸಂಬಂಧ repress ಆಗಿದೆ, ಇದರ ಕರ್ಷಣ ಬೇರೆ ಕಡೆಗೆ ಪಲ್ಲಟವಾಗಿ ಮೂಲಗತಿಯನ್ನು ಕಳೆದುಕೊಂಡು ಇಡಿ ಜೀವನ ಪ್ರಕ್ರಿಯೆಯ ಎನರ್ಜಿಯ

ಸ್ಥಗಿತತೆ ಉಂಟಾಗಿದೆ. ಅನುಭವದನ್ನು ಮೊದಲ ಬಾರಿಗೆ 'ಭಾರತಿಪುರ' ದಲ್ಲಿ ಕಾಣು ತ್ತೇವೆ. ಆದರೆ ಈ 'grotesque' ಕಾದಂಬರಿಯು ಕೇಂದ್ರವಾಗಿ ಶೋಧನೆಗೆ ಒಳಗಾಗುವುದಿಲ್ಲ. ಈ ಮೂಲ ಸಮಸ್ಯೆಯು ಒಂದು ಪ್ರತ್ಯಕ್ಷ ರೋಗ ಲಕ್ಷಣ ಮಾತ್ರ ವಾದ "ಮಂಜುನಾಥ ದೇವರು" ಕೇಂದ್ರ ಸಮಸ್ಯೆಯ ಸ್ಥಾನ ಪಡೆಯುತ್ತಾನೆ. ಈ ಸ್ಥಾನಿಕ Fetish, ಮೂಲ ಸಮಸ್ಯೆಯನ್ನು ಸಂಕೇತೀಕರಣದಲ್ಲಿ ವಿಕೃತವಾಗಿ ಸಂಕ್ಷಿಪ್ತಿ ಸುವುದಲ್ಲದೆ ಅದನ್ನು ಅಪಾರದರ್ಶಕವಾಗಿಸುತ್ತದೆ. ಇದರಿಂದಾಗಿ ನಾಯಕ ಜಗನ್ನಾಥನ ವೈಚಾರಿಕತೆ ಸ್ವಾತ್ಯಂತ್ರಕವಾದ ವಾಗಿ ಹೊಲೆಯರ ಗುಡಿ ಪ್ರವೇಶ ಸಮಾಜದ ಅಂತರಂಗಕ್ಕೂ ಪ್ರವೇಶ ಎಂಬ ಜೊಳ್ಳು ಪ್ರಾಕ್ಸಿಸ್‌ಗೆ ಅನುವು ಮಾಡಿ ಕೊಡುತ್ತದೆ. (ಇಲ್ಲಿ ನೆನಪಿಡಬೇಕಾದ ಸಂಗತಿ ಎಂದರೆ ಕಾದಂಬರಿಯು ನಾಯಕನ ಕ್ರಿಯೆ ಮತ್ತು ಆದರ ಪ್ರೇರಣೆ ಒಂದು ಸಾಮಾಜಿಕ ಸುಧಾರಣೆ ಅಲ್ಲ. ಹೊಲೆಯರ ಸಮಾಜದ ಅಂತರಂಗಕ್ಕೆ ಪ್ರವೇಶ ಎಂದರೆ ಹೊಸ ಚೈತನ್ಯದ ಒಳನುಗ್ಗುವಿಕೆ ಎಂಬ cataclysm ಆಗಿದೆ.)

ಸಲ್ಮಾನ ರಶ್ದಿಯ 'ಶೇಮ್' ಕಾದಂಬರಿಯು ಟ್ರೈಟ್ರೇಷನ್ ಪ್ರಕ್ರಿಯೆಯಿಂದ ಅದರ ಎಲ್ಲ ಅಂಶಗಳು-ಇತಿಹಾಸ, ಸತ್ಯ ಮತ್ತು ಕಾಲ್ಪನಿಕ ಘಟನೆಗಳು, ಚರಿತ್ರೆಗಳು, ಜ್ಞಾನ ಶಾಸ್ತ್ರೀಯ ಸಂದರ್ಭಗಳು ತತ್ವಗಳು, ರಾಜಕೀಯ ಸಾಂಸ್ಕೃತಿಕ ಘಟನೆಗಳು, ಅವುಗಳ ತಾತ್ವಿಕ ಪಾತಳಿಗಳು ಇತ್ಯಾದಿ ಇತ್ಯಾದಿ ಎಲ್ಲವೂ ಭಾಷೆಯ ವಿಶೇಷ ಸಂಘಟನೆಯಲ್ಲಿ, ಯಾವ ನೇರ ನಿರೂಪಣೆಗೂ ಸಿಗದ ರಾಸಾಯನಿಕ ಸರಿಯೋಗ ಹೊಂದುತ್ತವೆ.

ನಮ್ಮ ವೈಚಾರಿಕತೆಯ ಎರಡನೆಯ ತೊಡಕಿಗೆ ಬರುವ ಮುನ್ನ ಮಾರ್ಕ್ಸ್‌ನ ಒಂದು ಮಾತನ್ನು ಗಮನಿಸಬೇಕಾಗುತ್ತದೆ.: "ಕೆಟಗರಿಗಳು ಇರುವಿಕೆಯ ರೂಪ ಮತ್ತು ವೈಶಿಷ್ಟ್ಯಗಳಾಗಿವೆ."

ಒಬ್ಬ ವ್ಯಕ್ತಿಯ ಅಸ್ತಿತ್ವ ವನು ಜೀವಿಸುವ ಸಮಾಜದಲ್ಲಿನ ಸಾಮಾಜಿಕ ಸ್ಥಿತಿ ಯಾಗಿರುತ್ತದೆ. ಸಹಜವಾಗಿ ಒಂದು ಉದಾಹರಣೆ ಗಮನಿಸಿದರೆ ಈ ಮಾತು ಹೆಚ್ಚು ಸ್ಪಷ್ಟವಾಗಬಹುದು. ಎಲ್ಲ ಪ್ರಾಣಿಗಳಿಗೆ ಕಾಲು ಇರುತ್ತವೆ. ಮುಂದೆ, ಮನುಷ್ಯ ಪ್ರಾಣಿ ಈ ವ್ಯವಸ್ಥೆಯಲ್ಲಿ ಗೋಚರವಾಗಿ ಸಂಸ್ಕೃತಿಯ ಬೆಳವಣಿಗೆಯ ಹಂತದಲ್ಲಿ ಕಾಲಲ್ಲಿ ಮೆಟ್ಟಲು ಚಪ್ಪಲಿಗಳು ಅವಶ್ಯಕವಾಗಿ ಅದನ್ನು ನಿರ್ಮಿಸಿಕೊಳ್ಳುತ್ತಾನೆ. ಒಂದು ವಿಶಿಷ್ಟ ಸಮಾಜದಲ್ಲಿ, ಒಂದು ವಿಶಿಷ್ಟ ಸಂಸ್ಕೃತಿಯ ಬೆಳವಣಿಗೆ ಹಂತದಲ್ಲಿ ಕಾಲು ಸಾಂಸ್ಕೃತಿಕ ಅಂಗವಾಗಿ ಅವುಗಳಿಗೆ ಬೇಕಾಗುವ ಮೆಟ್ಟುಗಳನ್ನು ಸೃಷ್ಟಿಸುವವರು ಕೆಳಗಿನ ವರ್ಗದವರೇ ಇರಬೇಕೆಂದು ಉಕ್ಕಿನ ನಿಯಮ ಹುಟ್ಟಿಕೊಳ್ಳುತ್ತದೆ. ಈ ವರ್ಗದವರು ಮುಂದೆ ನಾವು ನಿಮ್ಮಂತೆಯೇ ಮನುಷ್ಯರು, ಈ ಕೆಲಸವನ್ನು ಮಾಡುವುದಿಲ್ಲ. ಅಥವಾ ಈ ಕೆಲಸದಲ್ಲಿ ನೀವೂ ಪಾಲ್ಗೊಳ್ಳಿರಿ, ನಿಮ್ಮ ಕೆಲಸದಲ್ಲಿ ಪಾಲ್ಗೊಳ್ಳಲು ನಮಗೆ

ಅವಕಾಶ ಕೊಡಿರಿ ಎಂದಾಗ ಆ ಇಡೀ ಸಮಾಜದ ಪ್ರಜ್ಞೆಯಲ್ಲಿ, ವ್ಯವಸ್ಥೆಯಲ್ಲಿ ಸ್ಫೋಟದ ಮುನ್ಸೂಚನೆ ತಲೆದೋರುತ್ತದೆ. ಇರುವನ್ನು ರೂಪಿಸುವ, ಅಮೂರ್ತವಾಗಿ ಆಳುವ ಕೃಟಗರಿಗಳು ತಿಳಿವಳಿಕೆಗೆ ನಿಲುಕುವಂತೆ ಮಾಡುವ ವೈಚಾರಿಕತೆಯು ಒಂದು (methodology) ನಮಗೆ ಸಿಕ್ಕದೆ ಇರುವ ಸಾಂಸ್ಕೃತಿಕ ಸ್ಥಿತಿ (ನಮ್ಮ ಇಂದಿನ ಜ್ಞಾನ ಸಂದರ್ಭ) ನಮ್ಮ ಎರಡನೆಯ ತೊಡಕಾಗಿದೆ.

ಉದಾಹರಣೆಗಾಗಿ ಕನ್ನಡದ ಇನ್ನೊಂದು ಮಹತ್ವದ ಕೃತಿ ಚಂದ್ರಶೇಖರ ಕಂಬಾರರ 'ಕರಿಮಾಯಿ'ಯ ಒಂದೆರಡು ಮುಖ್ಯ ವೈಶಿಷ್ಟ್ಯಗಳನ್ನು ವಿವರವಾಗಿ ಗಮನಿಸಬೇಕಾಗಿದೆ :

ಈ ಕಾದಂಬರಿಯ ಮುಖ್ಯ ವಸ್ತು ಕೂಡ 'ಮಿಥ್'ಗೆ ಸಂಬಂಧಿಸಿದ್ದು; ನಿಕ್ಕಿಯಾಗಿ ಹೇಳುವುದಾದರೆ ಮಿಥ್‌ನ್ನು ಕದಿಯುವುದಾಗಿದೆ. 'ಭಾರತಿಪುರ'ಕ್ಕಿಂತ ಇಲ್ಲಿಯ ಮಿಥ್ ಮತ್ತು ಮೈಥಿಕ್ ಸಂದರ್ಭ ಬೇರೆಯಾಗಿದೆ. ಇದನ್ನು ತಿಳಿದುಕೊಳ್ಳಬೇಕಾದರೆ ಮೊದಲು ಹಳ್ಳಿಯನ್ನು ಚೆನ್ನಾಗಿ ಅರಿಯಬೇಕಾಗುತ್ತದೆ.

1. ಹಳ್ಳಿ ಮುಖ್ಯವಾಗಿ ಒಕ್ಕಲುತನ ಹಾಗೂ ಅದಕ್ಕೆ ಸಂಬಂಧಿಸಿದ ವ್ಯವಸಾಯ ಗಳ ಉತ್ಪಾದನ ಕ್ರಮದಲ್ಲಿ ಬದುಕುತ್ತದೆ. ಈ ರೀತಿಯ ಉತ್ಪಾದನ ವಿಶೇಷ ರೀತಿಯ ಶ್ರಮ ವಿಭಜನೆಗೆ ಅನುವು ಇರುವುದಿಲ್ಲ. ತನ್ನ ಉಪಯೋಗಕ್ಕೆ ಬೇಕಾದ ಎಲ್ಲ ಮುಖ್ಯ ನಿರ್ಮಿತಿಯನ್ನು ನೇರವಾಗಿ ನಿಸರ್ಗದಿಂದ ಉತ್ಪಾದಿಸಿಕೊಳ್ಳುವುದರಿಂದ ಸಾಮಾಜಿಕ ಸಂಬಂಧಗಳ ಸಂಕೀರ್ಣ ವ್ಯೂಹದ ಉತ್ಪಾದನ ಕ್ರಮ (ಕಾರ್ಖಾನೆ ವಗೈರೆ) ರೀತಿಯಲ್ಲಿ ನಂತೆ ವಿವಿಧ ಜಟಿಲ ಸಂಬಂಧಗಳಿಗೆ ಹಾಗೂ ಅದಕ್ಕನುಗುಣವಾಗಿ ಬೆಳೆಯುವ ಪ್ರಜ್ಞೆಗೆ ಇಲ್ಲಿ ಅವಕಾಶವಿರುವುದಿಲ್ಲ.

2. ಹೀಗಿರುವುದರಿಂದ ಅಮೂರ್ತ ತತ್ವಗಳನ್ನು ಗ್ರಹಿಸುವ ತಾರ್ಕಿಕ ಶಕ್ತಿ ಯನ್ನು ಪ್ರಜ್ಞೆ ಪಡೆದಿಲ್ಲ. ಹಳ್ಳಿ ರಾಜಸ್ವರಹಿತ ಸಮಾಜವಾಗಿರುತ್ತದೆ. ರಾಜಕೀಯ ಸಂಸ್ಥೆಗಳ ಗೈರು ಹಾಜರಿಯಿಂದಾಗಿ ಸಮಾಜದ ಯಾವುದೇ ವರ್ಗದ ರಾಜಕೀಯ ಪ್ರತಿನಿಧಿತ್ವವಾಗಲೀ, ಅದನ್ನು ಸಂಘಟಿಸುವ ರಾಜಕೀಯ ಪ್ರಜ್ಞೆಯಾಗಲೀ ಅಲ್ಲಿ ಸಾಧ್ಯವಾಗುವುದಿಲ್ಲ. ದೇಶದ ಮಟ್ಟದಲ್ಲಿನ ರಾಜಕೀಯ ಸ್ವರೂಪದ ಅರ್ಥ ಇಲ್ಲಿ ಮೂಡುವುದಿಲ್ಲ.

3. ಪಾರಂಪರಿಕವಾಗಿ ಉತ್ಪಾದನ ಕ್ರಮ ಪುನರಾವರ್ತನೆಗೊಳ್ಳುವ ರೀತಿ ಯಲ್ಲಿಯೇ ಸಾಮಾಜಿಕ ಸನಾತನವಾದ ಪುನರ್ ನಿರ್ಮಿತಿಗೊಳ್ಳುತ್ತ ಹೋಗುತ್ತವೆ. ಅವೇ ಶ್ರೇಣಿಗಳು ಸ್ತರಗಳು ಪ್ರತಿ ಪೀಳಿಗೆಯಲ್ಲಿ ಹುಟ್ಟುತ್ತವೆ. ಈ ಪಡಿಯಚ್ಚಿನ

ಪ್ರಕ್ರಿಯೆ ಪಾತ್ರಗಳನ್ನು (roles) ಉಯಿಸುತ್ತದೆಯೇ ಹೊರತು ಹೊಸ ವ್ಯಕ್ತಿತ್ವಗಳನ್ನು ಹುಟ್ಟಿಸುವುದಿಲ್ಲ.

4. 'ಹಳ್ಳಿ' ಒಂದು ದೇಶದಲ್ಲಿ ಸ್ಥಿರವಾಗಿದ್ದರೂ ಆ ಮಟ್ಟದಲ್ಲಿನ ಐತಿಹಾಸಿಕ ಪ್ರಕ್ರಿಯೆಯ ಮಹತ್ವದ ಅಂಗವಾಗುವ ಪ್ರಜ್ಞೆಯು ಹುಟ್ಟುವುದಿಲ್ಲ. ತನ್ನ ಯಾವುದೇ ದುರಂತದ ಸಮಸ್ಯೆಯ ಪರಿಹಾರಕ್ಕಾಗಿ ದೇವರು, ಅವತಾರ, ಮಹಾತ್ಮ ಅಥವಾ ಪುರಾಣ ನಾಯಕರ ಪ್ರಭಾವಳಿ ಹೊಂದಿರುವ ಮುಂದಾಳಿನ ಮೊರೆ ಹೋಗುತ್ತದೆ.

5. ಇಲ್ಲಿನ ಸಮಾಜದ ಎಲ್ಲ ಶ್ರೇಣಿಗಳು, ಸ್ತರಗಳು ತಮ್ಮದೇ ಆದ ಆಕಾಂಕ್ಷೆಯ 'ಅಪಸ್ವರ' ಎತ್ತದಂತೆ ವ್ಯವಸ್ಥೆಯ ಸೇಂದ್ರಿಯತ್ವವನ್ನು ಕಾಪಾಡಿಕೊಂಡು ಹೋಗುವ ಒಂದು ಮೈಥಿಕ್ ಸೆಟ್ ಅಪ್ ಇರುತ್ತದೆ.

ತನ್ನ ವ್ಯಾಪ್ತಿಯಲ್ಲಿ ಸಮಗ್ರತೆಯನ್ನು ವ್ಯಕ್ತಿಸುವ ಮಿಥ್‌ದ ವೈಶಿಷ್ಟ್ಯಗಳನ್ನಷ್ಟು (ಕಾದಂಬರಿಗೆ ಅನುಗುಣವಾಗಿಯೇ) ಗಮನಿಸುವುದು ಅಗತ್ಯ.

ಹಳ್ಳಿಯ ಸಮಾಜದ ಮುಖ್ಯಸ್ಥ—ವತನದಾರ (ಗೌಡ, ದೇಸಾಯಿ ಇತ್ಯಾದಿ) —ಸ್ವಾತಂತ್ರ್ಯಪೂರ್ವ ಕಾಲದ ಬ್ರಿಟಿಶ್ ಸರಕಾರದ ಮತ್ತು ಪ್ರಜೆಗಳ ನಡುವಿನ ಮಧ್ಯವರ್ತಿ ಅಧಿಕಾರಿಯಾಗಿದ್ದ. ಅದರ ಜೊತೆಗೇ ಪಾರಂಪರಿಕವಾಗಿ ಬಂದ ಗಣ್ಯ ಜಮೀನ್ದಾರಿ ಸ್ಥಾನಮಾನ ಇತ್ತು. ಇದನ್ನೇ ಅವನು ತನ್ನ ಐಡೆಂಟಿಟಿಯಾಗಿಸಿಕೊಂಡಿದ್ದ. ವಿರೋಧಾಭಾಸವೆಂದರೆ ಮೊದಲನೆಯದರಲ್ಲಿ ಅಧಿಕಾರವಿತ್ತು ಆದರೆ ಮೌಲ್ಯಗಳಿರಲಿಲ್ಲ; ಎರಡನೆಯದರಲ್ಲಿ ಇದರ ವಿರುದ್ಧ ಸ್ಥಿತಿ.

ಈ ಸ್ಥಿತಿಯಲ್ಲಿ(ಒಂದು ದೇವರ)ಮಿಥ್ ವತನದಾರಿಕೆಯ ಅಧಿಕಾರಕ್ಕೆ ಧಾರ್ಮಿಕ ನೆಲೆಯಾಗಿ ಹಳ್ಳಿಯ ಯಾವುದೇ ರೀತಿಯ ಸಣ್ಣ ದೊಡ್ಡ ಬಿರುಕುಗಳನ್ನು ಮೀರಿ ಸರ್ವಗಾಮಿ-ಆಗಿಸುತ್ತದೆ. ಅಲ್ಲಿಯ ಎಲ್ಲ ಜನರಿಗೆ "ಒಪ್ಪಿಕೊಳ್ಳುವ ಸಿದ್ಧ ಸ್ಥಿತಿಗೆ" ಒಗ್ಗಿಸುತ್ತದೆ. ಇಂಥ ಮೈಥಿಕ್ ಸಾಮಾಜಿಕ ರಚನಾಕ್ರಮ ಹಳ್ಳಿಯ ಆಗುಹೋಗುಗಳನ್ನು 'ದೇವರ'—ದೈವೀ ಕಾರ್ಯ ಕಲಾಪಗಳ—ಮಟ್ಟದಲ್ಲಿ ಸ್ಥಾಪಿಸುತ್ತದೆ. ಎಲ್ಲ ಸ್ತರಗಳಲ್ಲಿ ಬದುಕುವವರಿಗೆ ವ್ಯವಸ್ಥೆ ವಿಧಿಸುವುದನ್ನಲ್ಲ ಜೀವನ ಅರ್ಥವಾಗಿಸುತ್ತದೆ. ವ್ಯವಸ್ಥೆಗೆ ಬೇಕಾಗುವ ಮೌಲ್ಯಗಳನ್ನು ಜನಿಸುವ, ಕಾಪಾಡುವ ಶಕ್ತಿಯಾಗಿರುತ್ತದೆ. ಎಲ್ಲ ಸ್ತರೀಯ ಪ್ರಭೇದಗಳನ್ನು ಮರೆಮಾಚಿ ಸೇಂದ್ರೀಯ ಸಂಬಂಧ ವ್ಯೂಹದಲ್ಲಿ ಹರಳುಗಟ್ಟಿಸಿ ಅವುಗಳಿಗೆ ಸ್ವತಂತ್ರ ಪ್ರಜ್ಞೆ ಹುಟ್ಟುವುದನ್ನು ತಡೆಯುತ್ತದೆ. ಸ್ತರಗಳ ನಡುವೆ ಭಿನ್ನಾಭಿಪ್ರಾಯ ಮೂಡುವುದನ್ನು ತಪ್ಪಿಸುತ್ತದೆ.

ಕಂಬಾರರ ಕಾದಂಬರಿಯಲ್ಲಿ ಇದೆಲ್ಲವೂ ನೈಜವಾಗಿ, ನಿರಾಯಾಸವಾಗಿ ಕಥೆಯ ರೂಪದಲ್ಲಿ ಮೂಡಿ ಬಂದರೂ ನಕ್ಕಿಯಾಗಿ ಇದೆಲ್ಲದರ ವೈಚಾರಿಕ ಸ್ವರೂಪದ ಕಡೆಗೆ ಓದುಗನ ಅರಿವನ್ನು ತಿರುಗಿಸುವ ಸಿಗ್ನಲ್‌ಗಳಿಲ್ಲ. ಇದರಿಂದಾಗಿ ಜಮೀನ್ದಾರಿ ವ್ಯವಸ್ಥೆಯ ಹಪಹಪಿ (nostalgic) ವಿಜೃಂಭಣೆಯ ಮಟ್ಟದಲ್ಲಿ ಓದುಗನ ಅರಿವನ್ನು ಸ್ಥಗಿತ ಗೊಳಿಸುತ್ತದೆ. ಉದಾಹರಣೆಯಾಗಿ ನಿಂಗೂನ ಪಾತ್ರ ನೋಡಿ : ತನ್ನ "ಅಶಕ್ತತನ" ದಿಂದಾಗಿ ತನ್ನ ಹೆಂಡತಿ ತನ್ನ ತಂದೆಯ ಜೊತೆಗೇ ಕೂಡುವುದನ್ನು ನೋಡಿ ಅವನನ್ನು ಕೊಂದು ಹಾಕುತ್ತಾನೆ. ನಿಂಗೂ ಇಲ್ಲಿ ಅನುಭವಿಸುವ ಅಸ್ತಿತ್ವದ "ಇಳಿಕೆ"ಯ ವಿವರಣೆ ಇಲ್ಲದ್ದರಿಂದ ತಾನು ಮಾಡಿದ ಗುನ್ಹೆಯಿಂದಾಗಿ ಬರುವ ಶಿಕ್ಷೆಯಿಂದ ಉಳಿಯುವುದ ಕ್ಕಾಗಿ 'ಕರಿಮಾಯಿ'ಯ ಕೃಪೆಯಾದ ಒಂದು ವಿಶೇಷ ಸಾಮಾಜಿಕ ವ್ಯಂಗ್ಯ ಪಾತ್ರ (ಹೆಣ್ಣಿನ ಅರಿವೆ ಧರಿಸಿ) "ಆಗು"ತ್ತಾನೆ. ಇದು ದುರಂತವಾಗದೆ ಹಾಸ್ಯ ಉಕ್ಕಿಸುವ ಕಥೆಯ ಸ್ವಾರಸ್ಯ ಮಾತ್ರವಾಗುತ್ತದೆ. (ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಬರಹ ಗಾರನಿಗೆ ಇದು ವ್ಯಂಗಿಸಬೇಕಾದ ವಿಷಯ ಮತ್ತು ಶೈಲಿಯ ಸಂದಿಗ್ಧತೆಯ ಸೂಕ್ಷ್ಮ ಪರಿವೆ ಇಲ್ಲದೆ ಹೋದಲ್ಲಿ ಇಂದಿನ ಸಂದರ್ಭದಲ್ಲಿ ಆವನು 'ಪ್ರಾಂತೀಯ ಸಿನಿಕ' ಮಾತ್ರ ವಾಗುತ್ತಾನೆ. ನಿಂಗೂನ ಆಗುಹೋಗುಗಳಲ್ಲಿ ಆ ಕಾಲದ ಸಮಾಜದ ಸನಾತನವಾದ ಮತ್ತು ಅದು ನಿರ್ಮಿಸುವ ಇಂದಿನ ಅನೇಕ ದುರಂತಗಳಿಗೆ ಇರುವ ಸುಳಿವುಗಳು ಕಣ್ಮರೆ ಯಾಗಿದೆ. ಸಮಾಜ ಕಠಿಣವಾಗಿ ವಿಧಿಸುವ 'ಗಂಡು ಹೆಣ್ಣು ಪಾತ್ರ; (sexual roles)ದಿಂದಾಗಿ ಕೆಲವರಿಗೆ ತಮ್ಮ ವಿಶೇಷ ವ್ಯಕ್ತಿತ್ವ (ಇದಕ್ಕೆ ಸಮಾಜ 'ಅಶಕ್ತತನ' ಅಥವಾ 'ವಿಕೃತಿ' ಎಂದು ಹೆಸರಿಸುತ್ತದೆ) ವನ್ನೇ ಬದುಕುವುದು ಸಾಧ್ಯವಾಗುವುದಿಲ್ಲ.

ಇತಿಹಾಸದ ಬೆಳವಣಿಗೆಯ ವಿಶಿಷ್ಟ ಹಂತದಲ್ಲಿ ಒಂದು ವಿಶಿಷ್ಟ ಸಾಮಾಜಿಕ ರಚನಾಕ್ರಮವು ಕಾಮುಸಂಬಂಧ, ಕಾಮುಜೀವನವನ್ನು ತನ್ನದೇ ಆದ ರೀತಿಯಲ್ಲಿ ಪುನರುತ್ಪತ್ತಿ ಮಾಡುತ್ತವೆ. ಈ 'ಸಾಂಪ್ರದಾಯಿಕತೆಯಿಂದಾಗಿ' role dsviant ವ್ಯಕ್ತಿತ್ವಗಳು ತಮ್ಮದೇ ಆದ ಮೌಲ್ಯತೃಪ್ತಿ ಇರುವ ಸ್ವತಂತ್ರ ಜೀವನ ರೀತಿಯನ್ನು ಕಂಡುಕೊಳ್ಳುವ ಸಾಮಾಜಿಕ ಹಂತ ಪಡೆಯದೇ ಹೋಗುತ್ತದೆ. ಕೇವಲ ಕಾಮ ಮಾತ್ರವಲ್ಲ, ಉಳಿದ ರಾಜಕೀಯ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ, ಸಂಬಂಧಗಳಲ್ಲಿ ಹೊಸ ಪರ್ಯಾಯ ಪಾತ್ರ ಲಭ್ಯವಾದರೆ ಮಾತ್ರ ಇತಿಹಾಸವನ್ನು ಗತಿಶೀಲ ಮಾಡುವುದು ಸಾಧ್ಯವಿದೆ. ಕರಿಮಾಯಿಯ ಕೃಪೆಯ ನಿಂಗೂನಂಥ ಸಂದಿಗ್ಧವಾಗಲೀ ಗುಡಿಸೀಕರನ ಹಾಸ್ಯಾಸ್ಪದ ರಾಜಕೀಯವಾಗಲಿ ಅಥವಾ ಸಾಮಾಜಿಕ ಮೌಲ್ಯ ಸಂದರ್ಭದಿಂದಾಗಿ ಒಬ್ಬಳ ಜೊತೆ ಮಲಗಿದ್ದೇ ದೊಡ್ಡ ಗಿಲ್ಟ್ ಆಗಿ ಗೌಡನ ಮಗ ತಲೆಮರೆಸಿಕೊಳ್ಳುವು ದಾಗಲಿ ಈ ಜೀವನ ರೀತಿಯ ರೋಗ ಲಕ್ಷಣಗಳಾಗಿವೆ.

ಹಳ್ಳಿಯಲ್ಲಿನ ಮಿಥ್ ಹೇಗೆ ಕಳುವಾಗುತ್ತದೆ ಅಥವಾ ತನ್ನ ಚೈತನ್ಯವನ್ನು ಹೇಗೆ ಕಳೆದುಕೊಳ್ಳುತ್ತದೆ ಎಂಬ ಕೇಂದ್ರ ಸಮಸ್ಯೆಯನ್ನು ಕಂಬಾರರು ನೈಜವಾಗಿ ಹಿಡಿದಿದ್ದಾರೆ

(ಸ್ವಾತಂತ್ರ್ಯ ಪೂರ್ವ ಹಳ್ಳಿಯಲ್ಲಿ ಪಂಚಾಯಿತಿ ಇತ್ತೇ. ಅದು ಇಲೆಕ್ಷನ್ ರೂಪದಲ್ಲಿ ಬಿಕ್ಕಟ್ಟು ಒಡ್ಡೀತೇ ಎಂಬುದು ಇಲ್ಲಿ ಮುಖ್ಯವಲ್ಲ. ಮಹತ್ವದ್ದೆಂದರೆ ಹಳ್ಳಿಯಲ್ಲಿ ಜಮೀನ್ದಾರಿ ಪದ್ಧತಿಯನ್ನು ನಿ:ಶಕ್ತಗೊಳಿಸುವುದಕ್ಕೆ ಮಧ್ಯಮವರ್ಗದ (ಅಂದರೆ ಮಧ್ಯಮ ಸ್ಥಾನಮಾನವಿದ್ದು ಒಂದಿಷ್ಟು ಆಸ್ತಿ ಪಾಸ್ತಿ ಇದ್ದವರು) ಅರ್ಧಶಿಕ್ಷಿತ ಹುಂಬ ತರುಣರು ಮತ್ತು ವ್ಯಾಪಾರಸ್ಥರು ಕಾರಣ. ಇಲ್ಲಿನ ಇನ್ನೊಂದು ಮುಖ್ಯ ಪ್ರಕ್ರಿಯೆ ಎಂದರೆ ಕೇವಲ ಸಣ್ಣಪುಟ್ಟ ಕಾರಣಗಳಿಂದ ಸಣ್ಣ ಜಗಳ, ಸಣ್ಣ ಪ್ರತಿಭಟನೆ, ಸಣ್ಣ ಅಸಮ್ಮತಿ ಮರಳಿ ಮರಳಿ ಜರುಗಿ ಮೈಥಿಕ್ ಇರುವಿನಲ್ಲಿ ಬಿರುಕು ಬೀಳುತ್ತದೆ ಎನ್ನುವುದು. ಇದರಿಂದಾಗಿ ಒಂದು ಕಡೆಗೆ ಗುಡಸೀಕರ, ಬಸವರಾಜು, ಚಿಮಣಾರಂಥ 'ದುಷ್ಟರು' ಇನ್ನೊಂದು ಕಡೆಗೆ ಗೌಡ, ದತ್ತಪ್ಪ, ದುರ್ಗವ್ವ, ನಿಂಗೂ ಇತ್ಯಾದಿ ಎಲ್ಲ ಪಾತ್ರ ಬಹಳ ನೈಜವಾಗುತ್ತವೆ.

ನಿಕ್ಕಿಯಾಗಿ ಯಾವ ಕಾರಣಕ್ಕಾಗಿ "ಕರಿಮಾಯಿ" ಗೆಲ್ಲುತ್ತದೆಯೋ ಅದೇ ಕಾರಣಕ್ಕಾಗಿ ಸೋಲುತ್ತದೆ ಎಂಬುದು ಒಂದು ವಿರೋಧಾಭಾಸ. ಗುಡಸೀಕರನ ಮಹತ್ವಾಕಾಂಕ್ಷೆಯನ್ನು ಬಳಸಿಕೊಂಡು ಬಸವರಾಜು ಕರಿಮಾಯಿಯ ಚಿನ್ನದ ಮುಖವನ್ನು ಕದಿಯುವುದು ಮಿಥನ್ನು ಕದಿಯುವುದು ಹೇಗೆ ಆಗುತ್ತದೆ ಎಂಬುದಕ್ಕೆ ಕಾದಂಬರಿಯಲ್ಲಿ ಉತ್ತರ ಸಿಗುವುದಿಲ್ಲ. 17ನೆಯ ಶತಮಾನದಲ್ಲಿ ಶಿವಾಜಿಯ ರಾಜ್ಯದಲ್ಲಿ ಭವಾನಿಯ ಮಿಥನ್ನು ಅಥವಾ ಅದೇ ಕಾಲದಲ್ಲಿ ಮೊಗಲರ ರಾಜ್ಯದಲ್ಲಿ ಭವಾನಿಯ ಮಿಥನ್ನು ಕದಿಯುವುದು ಸಾಧ್ಯವಿತ್ತೆ? ಆ ಕಾಲದ ಒಂದು ಹಳ್ಳಿಯ ಮಸೀದಿಯಲ್ಲಿ ಸತ್ತ ಹಂದಿ ಬಿದ್ದಿದ್ದು ಅಥವಾ ಒಂದು ಆಕಳನ್ನು ಕೊಂದದ್ದು ದೊಡ್ಡ ಸಾಮಾಜಿಕ ಉತ್ಪಾತಕ್ಕೆ ಕಾರಣವಾಗುವ ಸೂಚನೆಗಳಾದದಕ್ಕೆ ಇತಿಹಾಸ ಇದೆ. ಶಿವಾಪುರದಲ್ಲಿ ಪುರಾಣವಾಗುವದಕ್ಕೆ ಮತ್ತು ಅದನ್ನು ಕಾಪಾಡಲು ಆ ಸಾಮಾಜ ಅಸಹಾಯಕವಾಗುವುದಕ್ಕೆ ಕಾರಣ ಆ ಕಾಲದಲ್ಲಿ ಇಡೀ ರಾಷ್ಟ್ರಾದ್ಯಂತ ಪರಕೀಯ ಗುಲಾಮಗಿರಿಯ ವಿರುದ್ಧದ ಹೋರಾಟದಲ್ಲಿ ಬಂಡವಾಳಶಾಹಿ ವರ್ಗ ಹಾಗೂ ಶಿಕ್ಷಿತ ಮಧ್ಯಮ ವರ್ಗ ರಾಜಕೀಯವಾಗಿ ಮುಂದಾಳತ್ವ ಹೊಂದಿವೆ; ಸಮಾಜದಲ್ಲಿ ಎತ್ತರದ ಸ್ಥಾನಗಳಿಸಿವೆ. ವತನದಾರರು ಬ್ರಿಟಿಶರ ಹಸ್ತಕರೆಂಬುದು ಬೆಳಕಿಗೆ ಬಂದಿದೆ. ಊಳಿಗಮಾನ್ಯ ವ್ಯವಸ್ಥೆ "ಪರಿಣಾಮಕಾರಿ ಶೇಷ" ಮಾತ್ರವಾಗಿದ್ದು ದೇಶದ 'ಸ್ವಾತಂತ್ರ್ಯ'ಕ್ಕೆ ರಾಜಕೀಯ ಅರ್ಥದಲ್ಲಿ ವಿರೋಧಿಯಾಗಿದೆ. ಹಳ್ಳಿ ದ್ವೀಪದ ರೀತಿಯಲ್ಲಿ ಜೀವನ ನಡೆಸುತ್ತಿದ್ದರೂ ಅದರ ಆಗು ಹೋಗುಗಳು ರಾಷ್ಟ್ರೀಯ ಮಟ್ಟದ ಐತಿಹಾಸಿಕ ಪ್ರಕ್ರಿಯೆಗಳಿಂದ ನಿರ್ಧರಿತವಾಗಿರುತ್ತವೆ. ಇದು ಹಳ್ಳಿಯ ಅಪಕ್ವ ಪ್ರಶ್ನೆಯಲ್ಲಿ ಗುಡಸೀಕರ ಬಸವರಾಜು—ಚಿಮಣಾ ಇವರುಗಳು 'ಕರಿಮಾಯಿ'ಯ ಪುರಾಣವನ್ನು ಕದಿಯುವುದಾಗುತ್ತದೆ. ಇವರು ಕದಿಯದಿದ್ದರೂ ಆ ಮಿಥ್ ತನ್ನಿಂದ ತಾನೇ ಗೌಡ ದತ್ತಪ್ಪನನ್ನು ಬಿಟ್ಟು ಇನ್ನಾವುದೋ ವರ್ಗದ ಅಧಿಕಾರದ ಸಾಧನವಾಗುತ್ತಿತ್ತು. ಇದನ್ನು ಸ್ವಾತಂತ್ರ್ಯೋತ್ತರ ಕಾಲದ ಹಳ್ಳಿಗಳು ಸಿದ್ಧಪಡಿಸಿವೆ.

"ಕಳ್ಳನಲ್ಲ ಸುಳ್ಳನಲ್ಲ. ಅದೇನೊ ದೇಶಸೇವೆ ಅಂದ, ಚಳವಳಿ ಅಂದ, ಗಾಂಧಿ ನೀರು ತಂದ, ಅಂದ ಮಾತ್ರಕ್ಕೆ ಹೀಗೆ ಕೊಂದು ಹಾಕುವುದೇ? ನಿಶ್ಚಯವಾಗಿ ಆ ಕಾಲದಲ್ಲಿ ಹಳ್ಳಿಯ ಪ್ರಜ್ಞೆಯ ಮಟ್ಟ ಇಷ್ಟೇ ಇತ್ತು.

ವಿಸ್ತರದ ಪ್ರಜ್ಞೆಯ ಮತ್ತು ವೈಚಾರಿಕತೆಯ ಮಟ್ಟದ ಪಾತ್ರಗಳನ್ನು ಈ ಕಾದಂಬರಿಯಲ್ಲಿ ರಚಿಸಿದ್ದರೆ ಅವು ಸುಳ್ಳಾಗುತ್ತಿದ್ದವು. ಇದು ಸಾಹಿತ್ಯಕ ವಿರೋಧಾಭಾಸ.

ಆದರೆ ಇಷ್ಟೇ ನೈಜತೆಗೆ ಕಾದಂಬರಿ ಮಿತಿಗೊಂಡಾಗ ಅದು 'ಗ್ರಾಮಾಯಣ' ಅರಿವಿನ ಇನ್ನೊಂದು ಸ್ವರೂಪದ ನಕಲಾಗುವುದು ಮೊದಲಿಗಿಂತಲೂ ದೊಡ್ಡ ಸಾಹಿತ್ಯಕ ವಿರೋಧಾಭಾಸ.

'ಭಾರತಿಪುರ' ಅಥವಾ 'ಕರಿಮಾಯಿ' ಕಾದಂಬರಿಯು ಒರಟು ಸರಳೀಕರಣಗಳ (ಲಯೋನೆಲ್ ಟ್ರಿಲ್ಲಿಂಗ್) ದ ಉದಾಹರಣೆಗಳಲ್ಲ. ನಮ್ಮ ಸಮಾಜದ ಮೂಲಭೂತ ಸಮಸ್ಯೆಗಳನ್ನು ಅರಿಯುವ ತೊಡಕು ನಮ್ಮ ಸಾಹಿತ್ಯ ರಚನೆಯ ಪ್ರಕ್ರಿಯೆಯ ತೊಡಕೂ ಹೌದು ಎಂಬ ಸಂಕೀರ್ಣ ಸಮೀಕರಣ ಒಡ್ಡುವ ಮಹತ್ವದ ಕಲಾಕೃತಿಗಳು. ಇದನ್ನು ಈ ಲೇಖನ ಸಂದರ್ಭದಲ್ಲಿ ಮರೆತರೆ ಇದು 'ಅಶ್ಲೀಲ' ಸಮಾಜಶಾಸ್ತ್ರವಾಗುವ ಸಾಧ್ಯತೆಯಿದೆ.

ವೈಚಾರಿಕತೆ ಇಂದು ಲೇಖಕನಿಗೆ ತೊಡಕಾಗಿರುವ (ಮತ್ತು ಅನಿವಾರ್ಯವಾಗುವ) ಕಾರಣ, ತನ್ನ ಅಸ್ತಿತ್ವವನ್ನು ನಿರ್ಧರಿಸುವ ಇತಿಹಾಸದ ಪರಿಸರಕ್ಕೆ 'genuine comprehensibility'ಯ ಪಾತಳಿಯನ್ನು ನಿರ್ಮಿಸದೆ 'ನೈಜ'ವಾದದ್ದನ್ನು ಬರೆಯಲಾಗುವುದಿಲ್ಲ ಎಂಬುದು: ಅಥವಾ ಇಂಥ ಪಾತಳಿಯ ಅಭಾವದಿಂದಾಗಿ ಅವನ ಎಲ್ಲ ಕ್ರಿಯೆ ತನ್ನ ಉದ್ದೇಶದತ್ತ ಹ್ರಸ್ವ ದೃಷ್ಟಿಯ ತಡಕಾಟವಾಗುತ್ತದೆ ಎಂಬುದು.

ಎರಡನೆಯದಾಗಿ ಇಂಥ ಪಾತಳಿಯನ್ನು ಸೃಷ್ಟಿಸಿಕೊಳ್ಳಲು ಬೇಕಾಗುವ ದೊಡ್ಡ ಜ್ಞಾನ ಸಂದರ್ಭವನ್ನು ನಮ್ಮ ಬುದ್ಧಿವಂತರು ಇನ್ನೂ ನಿರ್ಮಿಸಿಲ್ಲ. ಆ ಕೆಲಸವನ್ನೂ, ಅದೂ ತನ್ನ ಕೃತಿಯಲ್ಲಿಯೇ ಮಾಡಬೇಕಾದ ಅನಿವಾರ್ಯತೆ ಲೇಖಕನ ಬೆನ್ನಿಗೆ ಬಿದ್ದಿದೆ. ಮೂರನೆಯದಾಗಿ ನಮ್ಮ ಓದುಗನನ್ನು ಅರಿವಿನಿಂದ ಸಣ್ಣ ವರ್ತುಲದಲ್ಲಿಯೇ ಪುನರಾವರ್ತನ ಹೊಂದಿರುವಂತೆ ಈ ವರೆಗೆ ನಮ್ಮ ಸಂಸ್ಕೃತಿ ನೋಡಿಕೊಂಡಿದೆ. ಈ ಈ ಗಾಣವನ್ನು ಕಿತ್ತು ಹಾಕುವ ಹೊಣೆಬರಹವೂ ಲೇಖಕನ ಪಾಲಿಗೆ ಬಂದಿದೆ.

# ಯು. ಆರ್. ಅನಂತಮೂರ್ತಿ: ಸಂದರ್ಶನ

—ಜಿ. ರಾಜಶೇಖರ್

ಜಿ. ರಾಜ ಶೇಖರ್: ನಿಮ್ಮ ಹುಟ್ಟು. ಬಾಲ್ಯಗಳ ಬಗ್ಗೆ ಹೇಳಿ.

ಅನಂತಮೂರ್ತಿ : ಹುಟ್ಟಿದ್ದು 1932 ರಲ್ಲಿ; ತೀರ್ಥಹಳ್ಳಿ ಹತ್ತಿರ ಮೇಳಿಗೆ ಅನ್ನೋ ಗ್ರಾಮದಲ್ಲಿ. ಪ್ರೈಮರಿ ಸ್ಕೂಲು ಓದಿದ್ದು ಮೇಳಿಗೆಯಲ್ಲೇ; ನನ್ನ ತಾಯಿ ಓದಿದ್ದೂ ಅಲ್ಲಿಯೇ. ಹೈಸ್ಕೂಲು ಓದಿದ್ದು ತೀರ್ಥಹಳ್ಳಿಯಲ್ಲಿ. ಆಗ ತೀರ್ಥಹಳ್ಳಿಯಲ್ಲಿ ಎಲೆಕ್ಟ್ರಿಸಿಟಿ ಇರಲಿಲ್ಲ. ಅದಕ್ಕಿಂತ ಮುಂಚೆ, ಸ್ವಲ್ಪ ಸಮಯ ಬೇಗುವಳ್ಳಿ ಅಂತ ಒಂದು ಗ್ರಾಮದಲ್ಲಿದ್ದೆವು. ಈ ನಡುವೆ ಕೆರೆಕೊಪ್ಪ ಅಂತ ಕಾಡಿನ ನಡುವೆ ಒಂದು ಸಣ್ಣ ಹಳ್ಳಿಯಲ್ಲಿದ್ದೆವು. ನಮ್ಮ ಅಪ್ಪ ಅಲ್ಲಿ ಶ್ಯಾನು ಭೋಗರಾಗಿದ್ದರು. ನಾನು ಆಗ ತುಂಬ ಚಿಕ್ಕೋನು. ಆದರೆ ಈಗಲೂ, ನನ್ನ ನೆನಪಿನಲ್ಲಿ ಉಳಿದಿರುವ ಅನೇಕ ಅನುಭವಗಳು ನನಗೆ ಆಗಿದ್ದು ನಾವು ಕೆರೆ ಕೊಪ್ಪದಲ್ಲಿ ಇದ್ದಾಗ್ಲೇನೆ. ಆಗ ಹುಲಿ ಒಂದೊಂದು ಸಲ, ನಮ್ಮ ಮನೆ ಎದುರುಗಡೇನೆ ಬಂದು ಮಲಗಿರ್ತಾ ಇತ್ತು. ನಮ್ಮ ಅಮ್ಮ ಹೆದರಿಕೊಳ್ತಾ ಇದ್ದಳು. ನನ್ನ 'ತಾಯಿ' ಕಥೆಯ (ಎಂದೆಂದೂ ಮುಗಿಯದ ಕಥೆ-1955) ಹುಲಿಕಥೇನ ನಮ್ಮ ಅಮ್ಮನೇ ನನಗೆ ಹೇಳಿದ್ದು. ನಮ್ಮ ಮನೆ ಎದುರು ಒಂದು ದಾಳಿಂಬೆ ಗಿಡ ಇತ್ತು. ಆ ದಾಳಿಂಬೆಗಿಡ ಮತ್ತು ದಾಳಿಂಬೆ ರಾಕ್ಷಸನ ಕಥೆ; ಆ ಗಿಡಕ್ಕೂ, ಆ ರಾಕ್ಷಸನ ಕಥೆಗೂ ನಾನೂ ಸಂಬಂಧ ಕಲ್ಪಿಸಿ ಕೊಂಡದ್ದು—ಈ ತರಹದ ಅನುಭವ ಎಲ್ಲ ನನಗೆ ಆಗಿದ್ದು ನಾವು ಕೆರೆಕೊಪ್ಪ ದಲ್ಲಿ ಇದ್ದಾಗ್ಲೇನೆ. ನಮ್ಮ ಮನೆ ಹತ್ತಿರ ಅಬ್ಬಕ್ಕ ಅಂತ ಒಬ್ಬಳಿದ್ದಳು. ಅವಳ ಮೈಮೇಲೆ ಗಣ ಬರ್ತಾ ಇತ್ತು; ಆಗ ಅವಳ ಎರಡೆರಡು ಮಕ್ಕಳನ್ನು ಕಟ್ಟಿ ಕೊಂಡು ಅವಳು ನಮ್ಮನೇಗೆ ಬರೋಳು. ಅಲ್ಲಿಗೆ ವರ್ಷಕ್ಕೆ ಒಂದೆರಡು ಸಲ ಬ್ಯಾರಿಗಳು ಬರೋರು—ವ್ಯಾಪಾರಕ್ಕೇ ಅಂತ. ತಾವು ತಂದ ಸಾಮಾನು ನಮಗೆ ಕೊಟ್ಟು ಅಕ್ಕೀನೋ, ಅಡಿಕೇನೋ ತೆಗೆದುಕೊಂಡು ಹೋಗುತ್ತಾ ಇದ್ದರು - ಬಾರ್ಟರಿಂಗ್. (Bartering), ಆ ಬ್ಯಾರಿಗಳು ನಮಗೆ ಮಿಠಾಯಿನೂ ತಂದು ಕೊಡ್ತಾ ಇದ್ದರು.

ಜಿ. ಆರ್.        :  ಕುವೆಂಪು ಕಾದಂಬರಿಗಳಲ್ಲಿ ಬರ್ತಾರಲ್ಲ, ಆ ತರಹದವರಾ?

ಯು. ಆರ್. ಎ :  ಆ ತರಹದವರು. ಅವರು ಚುಂಗಿನ ಚಪ್ಪಲಿ ಹಾಕೋತಾ ಇದ್ದರು. ನನಗೆ ಅಂತಹ ಚುಂಗಿನ ಚಪ್ಪಲಿ ಹಾಕ್ಕೋಬೇಕು ಅಂತ. ಬಹಳ ಆಸೆ. ನಮ್ಮ ಅಜ್ಜ ಆಗ ಪ್ರತಿದಿನ ಬೆಳಿಗ್ಗೆ ಎದ್ದು ಕತ್ತಿ ತೆಗೆದು ಕೊಂಡು ಹೋಗಿ ಕಾಡುತರಿದು ಬರ್ತಾ ಇದ್ದರು; ಇಲ್ಲದೇ ಇದ್ದರೆ ಕಾಡು ಮನೇನ ಮುಚ್ಚಿಕೊಳ್ಳುತ್ತೇ ಅಂತ. ಕಾಡು ಆಗ ನಮಗೆ ನಿಜವಾ ಗಿಯೂ ಹತ್ತಿರ ಹತ್ತಿರ ಸರಿದು ಬರುತ್ತಿದ್ದ ಹಾಗೆ ಅನ್ನಿಸುತ್ತಿತ್ತು. ಅಷ್ಟು ದಟ್ಟವಾಗಿತ್ತು. ಹುಲಿಗಳು ಬಂದು ದನಗಳನ್ನು ಎತ್ತಿಕೊಂಡು ಹೋಗಿ ಬಿಡ್ತಾ ಇದ್ದವು. ಎಲ್ಲೋ ದೂರದಲ್ಲಿ ಹುಲಿ ಗರ್ಜನೆ ಕೇಳಿಸ್ತು ಅಂದರೆ ದನಗಳು ಹೆದರಿಕೊಂಡು ಗಡ ಗಡ ನಡುಗೋವು. ಕೊಟ್ಟಿಗೆಯಲ್ಲಿ ದನಗಳ ಗಂಟೆ ಸದ್ದಾಗ್ತಾ ಇವೆ ಅಂದರೆ ಎಲ್ಲೋ ಹುಲಿ ಕೂಗುಕೊಳ್ತಾ ಇದೆ ಅಂತ. ಮೇಲೆ ಆ ಕಾಲದಲ್ಲಿ ಒಮ್ಮೊಮ್ಮೆ ಕಾಣಿಸಿಕೊಳ್ತಾ ಇದ್ದ ಬೆಂಕಿ-ಕಾಳ್ಗಿಚ್ಚು; ಕಾಡಲ್ಲಿ ಬೆಂಕಿ ಹತ್ತಿ ಕೊಂಡಾಗ, ಅದು ನಮ್ಮನ್ನು ಅಟ್ಟಿಸಿಕೊಂಡು ಬರುವ ಹಾಗೆ ಅನ್ನಿಸುತ್ತಿತ್ತು. ನನ್ನ ತಮ್ಮ ಒಬ್ಬನಿಗೆ ಎಚ್ಚರ ತಪ್ಪಿ ಹೋಗುವ ರೋಗ ಇತ್ತು-ಮೂರ್ಛೆ ರೋಗ. ನಮ್ಮ ಮನೆಗೆ ಬಂದವರು ಯಾರೋ ಒಬ್ಬರು ಅವನನ್ನು ತೊಡೆ ಮೇಲೆ ಮಲಗಿಸಿಕೊಂಡು ಚುಟುಕ ಹಾಕಿ ಹಗಲೂ ರಾತ್ರಿ ಜಪ ಮಾಡಿದರು. ಮೃತ್ಯುಂಜಯ ಜಪ- ಅವನ ರೋಗ ಗುಣವಾಗಲೀ ಅಂತ. ಆಮೇಲೆ ಅವನಿಗೆ ಗುಣವಾಯಿತು. ಅದ್ದರಿಂದ ನನಗೆ, ಏನು ಬಂದರೂ ಮೃತ್ಯುಂಜಯ ಜಪ ಮಾಡಿದರೆ ಗುಣವಾಗುತ್ತೇ ಅಂತ ಒಂದು ನಂಬಿಕೆ-ಒಂದು ತರಹದ magical ಆದ ಅನುಭವ.

ಆಮೇಲೆ, ನಾವು ಕೆರೆಕೊಪ್ಪದಲ್ಲಿದ್ದಾಗ್ಲೇನೆ ನಮ್ಮ ಮನೆಯಲ್ಲಿ ಒಂದು ರಾದ್ಧಾಂತವಾಗಿ ಹೋಯಿತು. ನಮ್ಮ ಸೋದರ ಮಾವ ಒಬ್ಬ ಸತ್ತು ನಮ್ಮ ಅಜ್ಜನಿಗೂ ಅವನ ಮನೆಯವರಿಗೂ ಅದು ಏನೇನೋ ಜಗಳವಾಯಿತು; ಆ ಸೋದರ ಮಾವನ ಮದುವೆ ಮಾಡಿಸಿದ್ದು ನಮ್ಮ ಅಜ್ಜ. ಆ ಜಗಳದಿಂದ ನಮ್ಮ ಅಜ್ಜ ಬೇಸತ್ತು, ನಮ್ಮ ಅಪ್ಪ ಬೇಸತ್ತು, ನಮ್ಮ ಅಮ್ಮ ಬೇಸತ್ತು ನಮ್ಮ ಮನೆ ಯಲ್ಲಿ ಆ ವರ್ಷ ದೀಪಾವಳಿ ನಿಂತು ಹೋಯಿತು. ಆವತ್ತು ಬೆಳಗ್ಗಿನ ಜಾವ, ನಾನು ಸ್ನಾನ ಮಾಡಿ ಆಕಾಶ ನೋಡ್ತಾ ನಿಂತಾಗ ರೆಕ್ಕೆಗಳಿದ್ದ ಮನುಷ್ಯಾಕೃತಿಯು ಎರಡು ಆಕಾಶದಲ್ಲಿ ಹಾರಿ ಹೋಗ್ತಾ ಇದ್ದ ಹಾಗೆ ಕಂಡಿತು. ನಾನು ಮನೆಯವ ರನ್ನು ಕೂಗಿ ಕರೆದು ಅದನ್ನು ಹೇಳಿದೆ. ಆದರೆ ಆಕಾಶದಲ್ಲಿ ಏನೂ ಇರಲಿಲ್ಲ

ಮನೆಯವರು ನಕ್ಕು ಬಿಟ್ಟರು. ಆ ನೆನಪು ಈಗಲೂ ನನಗೆ ಇದೆ. ಆಗ ಬಹಳ ದಿನಗಳವರೆಗೆ. ಪ್ರಾರ್ಥನೆ ಮಾಡಿದರೆ ದೇವರು ಪ್ರತ್ಯಕ್ಷ ಆಗ್ತಾನೆ ಅಂತ ನಾನು ನಂಬಿದ್ದೆ. ಆ ಥರದ Religious ಆದ ಅನುಭವಕ್ಕೋಸ್ಕರ ನಾನು ಹಾತೊರೆದಿದ್ದೀನಿ. ಅದು ಆಗೋಲ್ಲ ಅಂತ ಆವಾಗ್ಲೂ ನನಗೆ ಗೊತ್ತಿತ್ತು; ಆದರೂ ಅದಕ್ಕೆ ನಾನು ಆಶೆ ಪಟ್ಟಿದೀನಿ. ಅದಕ್ಕೆ ನನಗೆ ಈ ಕಾವಿ ತೊಟ್ಟೋರನ್ನು ಕಂಡರೆ ಸ್ವಲ್ಪ ಹೊಟ್ಟೆ ಕಿಚ್ಚು. (ನಗು.) ನಾನೂ ಆ ತರಹ ಆಗ ಬೇಕೂ ಅಂತ ಬಹಳ ಬಯಸಿದೀನಿ. ಅದರ ಆಕರ್ಷಣೆ ಈಗಲೂ ನನಗೆ ಇದೆ. ಈಗ ದೇವಸ್ಥಾನಕ್ಕೆ ಹೋಗಿ ಭಕ್ತಿಯಿಂದ ನಮಸ್ಕರಿಸುವುದು, ನನಗೆ ಸಾಧ್ಯವೇ ಇಲ್ಲ. ಆದರೆ ಹಾಗೆ ನಮಸ್ಕರಿಸುವವರನ್ನು ಕಂಡರೆ, ನನಗೂ ಅದು ಸಾಧ್ಯವಾದರೆ, ಅಂತ ಒಮ್ಮೊಮ್ಮೆ ಅನ್ನಿಸುತ್ತೆ. ಎಲ್ಲಾದರೂ ದೂರದಲ್ಲಿ ಭಜನೆ ಕೇಳಿದರೆ ನನಗೆ ಈಗಲೂ ಕಣ್ಣಲ್ಲಿ ನೀರು ತುಂಬಿಕೊಳ್ಳುತ್ತೆ.

ನಾನು ಹೈಸ್ಕೂಲು ಓದಿದ್ದು ತೀರ್ಥಹಳ್ಳಿಯಲ್ಲಿ; ನಮ್ಮ ಅಪ್ಪ ಆಗ ಮಠದಲ್ಲಿ ಕೆಲಸ ಮಾಡ್ತಾ ಇದ್ದರು. ಹೈಸ್ಕೂಲು ಮುಗಿಯೋವರೆಗೆ ನಾನು ರೈಲು ನೋಡಿರಲಿಲ್ಲ. ರೈಲು ಎಲೆಕ್ಟ್ರಿಸಿಟಿ ಎಲ್ಲಾ ನೋಡಿದ್ದು ಶಿವಮೊಗ್ಗದಲ್ಲೇನೆ. ತೀರ್ಥಹಳ್ಳಿಯಲ್ಲ ನಾನು ನೋಡಿದ ಅನೇಕರು ಈಗಲೂ ನನ್ನ ನೆನಪಿನಲ್ಲಿ ಉಳಿದಿದ್ದಾರೆ. ಸಿನ್ಹ ಅಂತ ಒಬ್ಬರಿದ್ದರು. ಅವರ ನಿಜವಾದ ಹೆಸರು ಶ್ರೀನಿವಾಸ ಜೋಯಿಸ್ ಅಂತ. ಆದರೆ ಸಿನ್ಹ ಅಂತ, ಅದು ಯಾಕೋ ಹೆಸರು ಬದಲಾಯಿಸಿ ಕೊಂಡಿದ್ದರು. ಅವರು ಒಂದು ಡೈನೆಮೋದಲ್ಲಿ ನಡೆಯುತ್ತಿದ್ದ ರೇಡಿಯೋ ದಲ್ಲಿ ಬಿ.ಬಿ.ಸಿ. ಕೇಳ್ತಾ ಇದ್ದರು. ಬಿ.ಬಿ.ಸಿ. ಇಂಗ್ಲೀಷ್ ತರಹಾನೇ ಇಂಗ್ಲೀಷ್ ಮಾತಾಡ್ತಾ ಇದ್ದರು; ತುಂಬ anglicised ಮನುಷ್ಯ. ನಾವು ಸ್ಕೂಲು ಮುಗಿಸಿ ಮನೆಗೆ ಹೋಗುವಾಗ–ಅಲ್ಲಿ ದಾರಿಯಲ್ಲಿ ಚಾರ್ಲಿ ಡಾಕ್ಟರ ಷಾಪು ಅಂತ ಒಂದು ಅಂಗಡಿ ಇತ್ತು–ಅಲ್ಲಿ ಕೂತುಕೊಂಡು ನಮಗೆ ಜಾರ್ಜ್ ಬರ್ನಾಡ್ ಷಾ ಬಗ್ಗೆ ಹೇಳ್ತಾ ಇದ್ದರು. ನಮಗೆ ಇನ್ನೊಬ್ಬರು ಮೇಷ್ಟರು ಇದ್ದರು; ಅವರು ರ್‍ಯಾಷನಲಿಷ್ಟು. "ಯುದ್ಧ ಭೂಮಿಯಲ್ಲಿ ಯುದ್ಧ ನಡೀತಾ ಇರೋವಾಗ್ಲೇನೆ ಶ್ರೀಕೃಷ್ಣಪರಮಾತ್ಮ ಅರ್ಜುನನಿಗೆ ಗೀತೆ ಬೋಧಿಸೋದು ಹೇಗೆ ಸಾಧ್ಯ" ಅಂತ ಅವರು ಕ್ಲಾಸಿನಲ್ಲಿ ಪ್ರಶ್ನೆ ಮಾಡ್ತಾ ಇದ್ದರು. ನಾನು ಮಠದ ಹಿನ್ನೆಲೆಯಿಂದ ಬಂದವನು; ಇಂತಹದ್ದನ್ನೆಲ್ಲ ಕೇಳಿದರೆ ಮನಸ್ಸಿನಲ್ಲಿ ಉತ್ಪಾತವೇ ಆಗಿ ಬಿಡುತ್ತಿತ್ತು. ಇದನ್ನು ಕೇಳಿಕೊಂಡು ಬಂದು ನಮ್ಮ ಮನೆಯವರಿಗೆ ಅದನ್ನ ತಿರುಗಾ ಹೇಳುವುದೇ ನಮಗೆ ಒಂದು ಖುಷಿ. ಹೀಗೆ ಇವನ್ನ ನಾನು ಎಲ್ಲೊ ಒಂದು ಕಡೆ ಬರೆದಿದೀನಿ–ನಮಗೆ ಆವಾಗ ಒಂದು ಕಡೆ

ಮಧ್ಯಯುಗ, ಇನ್ನೊಂದು ಕಡೆ ಹೊಸಯುಗ, ಇವೆಲ್ಲ ಒಂದೇ ದಿನದ ಅನುಭವದಲ್ಲಿ, ಅನೇಕ ಸ್ತರಗಳಲ್ಲಿ ದೊರಕ್ತಾ ಇದ್ದವು. ನಾನು ಆಗ ನೋಡಿದ ಅನೇಕರು absentee land lords ಆಗಿದ್ದವರು. ಅವರೆಲ್ಲ ಈಗ್ಲೆ ತುಂಬ ಬಡವರಾಗಿದ್ದಾರೆ. ಗೇಣಿ ಶಾಸನ ಬಂದು, ನನಗೆ ಗೊತ್ತಿದ್ದ, ನಿಜಕ್ಕೂ ಒಳ್ಳೆಯವರಾಗಿದ್ದ, ನಿಜಕ್ಕೂ ಸುಸಂಸ್ಕೃತರಾಗಿದ್ದ ಅನೇಕರು ತಮಗಿದ್ದದನ್ನೆಲ್ಲ ಕಳಕೊಂಡಿದ್ದಾರೆ. ಘಾಟಿಗಳಾಗಿದ್ದವರು, ಭೂಮಿ ಜೊತೆ ಸಂಪರ್ಕವನ್ನು ಕಳಕೊಳ್ಳದೆ ಇದ್ದವರು ಆಗಲೂ ಶ್ರೀಮಂತರಾಗಿದ್ದರು: ಈಗಲೂ ಶ್ರೀಮಂತರಾಗಿಯೇ ಇದ್ದಾರೆ.

ಜಿ. ಆರ್.: ನಿಮ್ಮ ಬಾಲ್ಯದಲ್ಲಿ ನೀವು ಏನು ಓದ್ತಾ ಇದ್ದಿರಿ? ಆಗ ನಿಮ್ಮ ಮನಸ್ಸಿನ ಮೇಲೆ ತುಂಬ ಪರಿಣಾಮ ಮಾಡಿದ ಕೃತಿ ಯಾವುದು?

ಯು. ಆರ್. ಎ.: ನನ್ನ ಮನಸ್ಸಿನ ಮೇಲೆ ಅತ್ಯಂತ ಗಾಢವಾದ ಪರಿಣಾಮಮಾಡಿದ ಮೊದಲನೆಯ ಕೃತಿ ಕಾರಂತರ ಚೋಮನ ದುಡಿ. ಅವನ್ನು ಓದಿದಾಗ, ಹರಿಜನರ ಬಗ್ಗೆ ನನಗಿದ್ದ ಅಭಿಪ್ರಾಯವೇ ಬದಲಾಯಿತು ಪ್ರತಿ ನಿತ್ಯ ನಾನು ನೋಡುತ್ತಿದ್ದ ಹರಿಜನರಿಗೂ ಇಂತಹ ಆಸೆಗಳೆಲ್ಲ ಇರೋದಕ್ಕೆ ಸಾಧ್ಯ; ಅವರ ಬದುಕಿನಲ್ಲೂ ಅಂತಹ ಕಲಾತ್ಮಕತೆ ಇರೋದು ಸಾಧ್ಯ ಅಂತ ನನಗೆ ಗೊತ್ತಾಗಿದ್ದು 'ಚೋಮನ ದುಡಿ' ಓದಿದಾಗ್ಲೇ. ನಮ್ಮ ಮನೆ ಹತ್ತಿರ ಆವಾಗ ಕಿಳ್ಳೇ ಕ್ಯಾತರು ಬಂದು ಬೀಡು ಬಿಡ್ತಾ ಇದ್ದರು. ಅವರು ಹಾಡೋದು, ಕುಣಿಯೋದು ಇದನ್ನೆಲ್ಲ ನೋಡಿದಾಗ, ನನಗೆ ಗೊತ್ತಿಲ್ಲದ ಪ್ರಪಂಚವೊಂದೂ ಈ ವಾಸ್ತವ ಜಗತ್ತಿನಲ್ಲೇ ಇದೆ ಅನ್ನೋದು ಕಂಡಿತು. 'ಚೋಮನ ದುಡಿ' ಓದೋದಕ್ಕೆ ಮೊದಲು, ಗಳಗನಾಥರು, ವೆಂಕಟಾಚಾರ್ಯರು ಇವರ ಕೃತಿಗಳನ್ನೆಲ್ಲ ಓದಿದ್ದೆ; ಅವೂ ನನ್ನ ಮೇಲೆ ತುಂಬ ಪರಿಣಾಮ ಮಾಡಿದ್ದವು. ತೀರ್ಥಹಳ್ಳಿಯಲ್ಲಿ ಆಗ ಬಹಳ ಒಳ್ಳೆಯ ಲೈಬ್ರರಿ ಇತ್ತು. ಮತ್ತು ಅಂತಹ ಮಡಿವಂತ ವಾತಾವರಣದಲ್ಲಿಯೂ ನಮಗೆ ಗೋಪಾಲಕೃಷ್ಣರಾಯರ "ಕಲಿಯುಗ" ಅಂತ ಒಂದು ಪೇಪರು ಸಿಗ್ತಾ ಇತ್ತು. ನಮಗೆ sex education ಯಾರೂ ಕೊಡಬೇಕಾದ್ದೇ ಇರಲಿಲ್ಲ. ಎಲ್ಲ ಆ 'ಕಲಿಯುಗ'ದ ಮುಖಾಂತರ ನಮಗೆ ಗೊತ್ತಾಗೋದು. (ನಗು). ಆದ್ದರಿಂದ ನೀವು ಹಳ್ಳಿಯಲ್ಲಿ ಎಂತಹ orthodox ಮನೆಯಿಂದ ಬಂದ್ರೂನೂ ಇನ್ನೊಂದು ಜಗತ್ತಿನ ಪರಿಚಯ ಆಗೋದು ಆಗಿಯೇ ಬಿಡುತ್ತೆ. ಅದರಲ್ಲಿ ಯಾವ ಅನುಮಾನಾನೂ ಇಲ್ಲ. ನನಗೆ ಈಗ್ಲೆ ಇನ್ನೊಬ್ಬರ ನೆನಪು ಬರ್ತಾ ಇದೆ. ಅಡ್ಡೆ ಸುಬ್ಬಣ್ಣಾಚಾರ್ಯರು ಅಂತ ಒಬ್ಬರಿದ್ದರು. ಅವರು ಮಠದಲ್ಲಿ ಸಂಸ್ಕೃತ ಪಾಠ ಹೇಳ್ತಾ ಇದ್ದರು; ದೊಡ

ಸಂಸ್ಕೃತ ಪಂಡಿತರು. ತರ್ಕ, ವಾಕ್ಯಾರ್ಥಗಳಲ್ಲಿ ಹೆಸರು ಮಾಡಿದವರು. ತೀರ್ಥಹಳ್ಳಿಯಲ್ಲಿ ಜ್ಞಾನೇಂದ್ರ ಪ್ರಭುಗಳು ಅಂತ ಇನ್ನೊಬ್ಬರಿದ್ದರು. ಅವರು ಆರ್ಯ ಸಮಾಜಿಸ್ಟ್. ಅವರು ಕ್ರಿಸ್ತಿಯನ್ನರಾಗಿದ್ದವರು ಹಿಂದೂ ಧರ್ಮಕ್ಕೆ ಪರಿವರ್ತಿತರಾಗಿ, "ನನ್ನ ಮತಾಂತರ" ಅಂತ ಒಂದು ಪುಸ್ತಕ ಬರೆದಿದ್ದರು. ಅದಕ್ಕೆ ಪಂಡಿತ ನರಸಿಂಹ ಶಾಸ್ತ್ರಿಗಳು ಮುನ್ನುಡಿ ಬರೆದಿದ್ದರು ಅಂತ ನನ್ನ ನೆನಪು. ಈ ಜ್ಞಾನೇಂದ್ರ ಪ್ರಭುಗಳು ಮತ್ತು ಅವರ ಇನ್ನೊಂದಿಬ್ಬರು ಸ್ನೇಹಿತರು ಸೀದ ನಮ್ಮ ಮಠಕ್ಕೆ ಬಂದುಬಿಡೋರು; ಅಡ್ಡೆ ಸುಬ್ಬಣ್ಣಾಚಾರ್ಯರ ಹತ್ತಿರ ಇವರದ್ದು ದೊಡ್ಡವಾದ— ಭೂಮೀ ಗುಂಡಗಿದೇ ಅಂತ; ಇಲ್ಲ ಚಟ್ಟೆಯಾಗಿದೇ ಅಂತ ಅವರು. (ನಗು), ಇದನ್ನೆಲ್ಲ ಕೇಳ್ತಾ ನಮಗೆ ಗೆಲಿಲಿಯೋ ತನ್ನ ಕಾಲದಲ್ಲಿ 'ಏನೇನನ್ನು ಕಂಡಿರಬಹುದೋ, ಅಂತಹದ್ದರ ಅನುಭವ. ನಮಗೆ ಅವೆಲ್ಲ ಆಶ್ಚರ್ಯದ ವಿಷಯಗಳಾಗಿದ್ದವು; ನಮ್ಮನ್ನು ಬಿಡುಗಡೆ ಮಾಡುವಂತಹ ವಿಷಯಗಳಾಗಿದ್ದವು. ಅಥವಾ ಗ್ರಹಣ ಹೇಗಾಗುತ್ತೆ ಅಂತ ಮೊದಲು ಗೊತ್ತಾದಾಗ ಅದು ನಾವು ತಿಳಕೊಂಡ ಹಾಗಲ್ಲ ಅನ್ನೋದು ತಿಳಿದಾಗ ನಮ್ಮ ಮನಸ್ಸಿನಲ್ಲಿ ಅದು ಒಂದು ಕಾವ್ಯದಂತಹ ಅನುಭವ ಆಗೋದು. ಅಂತಹ ಚರ್ಚೆಗಳನ್ನ ನಾನು ಬಹಳ ಕೇಳಿದೀನಿ. ಚರ್ಚೆಯಲ್ಲಿ ಇಬ್ಬರೂ ಪಟುಗಳೇ. ಅಡ್ಡೆ ಸುಬ್ಬಣ್ಣಾಚಾರ್ಯರು—ದೊಡ್ಡ ತಾರ್ಕಿಕ ವಿದ್ವಾಂಸರು. ಇವರೂ ಅಷ್ಟೇ; ಹೊಸದನ್ನೆಲ್ಲ ಚೆನ್ನಾಗಿ ಓದಿಕೊಂಡು ಬರ್ತಾ ಇದ್ದರು. ನಮ್ಮ ಅಪ್ಪ ಇದರಲ್ಲಿ ಎರಡು ಪ್ರಪಂಚಗಳ ನಡುವೇನೂ ಇದ್ದರು. ಒಂದೊಂದು ಸಲ ಅವರು ಕ್ರಾಪು ಬಿಡ್ತಾ ಇದ್ದರು. ಕೋರ್ಟಿಗೆ ಹೋಗೋದು ಹೆಚ್ಚಾದಾಗ ಕ್ರಾಪು ಬಿಡ್ತಾ ಇದ್ದರು. ಮಠದಲ್ಲಿ ಇರೋದು ಜಾಸ್ತಿ ಆದಾಗ ಜುಟ್ಟುಬಿಡ್ತಾ ಇದ್ದರು. ಕೆಲವು ಸಲ ಕ್ರಾಪು ಜುಟ್ಟು ಎರಡೂ ಇರೋದು. (ನಗು). ಅವರು ಗಾಂಧಿಯನ್ನು ಓದ್ತಾ ಇದ್ದರು. ಗಾಂಧಿ ಬಗ್ಗೆ ಅವರಿಗೆ ಹೆಚ್ಚು ಹೆಚ್ಚು sympathy ಇತ್ತು. ನಮ್ಮ ಅಪ್ಪ ಪಂಚಾಂಗ ಬರೀತಿದ್ರು. ಅದರ ಗಣಿತಕ್ಕೆ ಅಂತಾನೇ ಅವರು ಫ್ರಾನ್ಸ್‌ನಿಂದ ಒಂದು astronomical almanac ತರಿಸಿದ್ದರು. 'ನಮ್ಮವರು ಲೆಕ್ಕ ಮಾಡಿದ ತಿಥಿ ನಕ್ಷತ್ರ ಎಲ್ಲ ತಪ್ಪಿ ಹೋಗಿ ಬಿಟ್ಟಿದೆ: ಇದು ಬರೀ ritualsಗೆ ಮಾಡಿರೋದು. ಇದರ ಗಣಿತ ಎಲ್ಲ ಸರಿಯಿಲ್ಲ. ಈ almanacನಲ್ಲಿ ಅದೆಲ್ಲ ಸರಿಯಾಗಿರುತ್ತೆ' ಅಂತ ಅವರು ಹೇಳ್ತಾ ಇದ್ದರು. ಆಗಲೇ ಅವರಿಗೆ ಎರಡು ಮನಸ್ಸು. ಇಂತಹದ್ದನ್ನೆಲ್ಲ ನಾನು ಚಿಕ್ಕಂದಿನಲ್ಲಿಯೇ ಕಂಡಿದೀನಿ ಆದಕ್ಕೇನೇ ಇವತ್ತಿಗೂ ನನ್ನ ಸಾಂಕೇತಿಕ ಪ್ರಪಂಚವೆಲ್ಲ ಇರೋದು ಅಲ್ಲೇ. ಇವತ್ತಿನ ಅಗತ್ಯಗಳಿಗೂ ನನಗೆ ಬೇಕಾದ ನೆನಪುಗಳೆಲ್ಲ ನನ್ನ ಬಾಲ್ಯದಲ್ಲಿಯೇ ಇವೆ. ಅಂದರೆ ನಾನು ಬರೀ ಆ ನೆನಪುಗಳಿಂದಲೇ ಬರೀತೀನಿ ಅಂತಲ್ಲ; ಆದರೆ

ಇವತ್ತು ಆಗ್ತಾ ಇರೋದಕ್ಕೆಲ್ಲ, ಈ conflictsನ ಮೂಲಾರ್ಥಗಳೆಲ್ಲ ನನಗೆ ನನ್ನ ಬಾಲ್ಯದಲ್ಲಿಯೇ ಲಭಿಸಿದವು. ನಾನು ತೀರ್ಥಹಳ್ಳಿಯಲ್ಲಿದ್ದಾಗ್ಲೇನೇ ಓದಬೇಕಾದ್ದನ್ನೆಲ್ಲ ಓದಿದೆ; ಸಂಧಿಸಬೇಕಾದವರನ್ನೆಲ್ಲ ಸಂಧಿಸಿದೆ. ನಾನು ಹೈಸ್ಕೂಲಲ್ಲೆ ಓದ್ತಾ ಇದ್ದಾಗ ತೀರ್ಥಹಳ್ಳಿಗೆ ಒಬ್ಬರು ಸಮಾಜವಾದಿ–ರಾಮನಂದನ ಮಿಶ್ರ ಬಂದಿದ್ದರು. ಅವರ ಭಾಷಣವನ್ನು ನಾನು ಕೇಳಿದೆ. ಈಗ ನನಗೆ ಅವರು ಅವತ್ತು ಆಡಿದ ಮಾತುಗಳೆಲ್ಲ ಸಾಮಾನ್ಯವಾದ ಮಾತುಗಳ ಹಾಗೆ ಕಾಣಿಸುತ್ತದೆ. ಆದರೆ ಆಗ ಅವರ ಭಾಷಣ ನನ್ನ ಮನಸ್ಸಿನ ಮೇಲೆ ತುಂಬ ಪರಿಣಾಮ ಮಾಡಿತು. ಅವರು ಏನು ಹೇಳಿದರೂ ಅಂದ್ರೆ "ಗಾಳಿ–ಅದನ್ನು ಯಾರು ಹಂಚಿಕೋತಾರೆ? ಅದು ಪ್ರಕೃತಿಯ ಕೊಡುಗೆ; ಎಲ್ಲರಿಗೂ ಸೇರಿದ್ದು. ಸೂರ್ಯನ ಬೆಳಕು-ಅದೂ ಪ್ರಕೃತಿಗೆ ಸೇರಿದ್ದು. ಯಾರದ್ದಾದರೂ ಸೊತ್ತೇನು ಅದು? ಆದರೆ ಭೂಮಿ ಅದೂ ದೇವರಿಗೆ ಸೇರಿದ್ದು. ಅದುಯಾಕೆ ಕೆಲವರ ಸೊತ್ತು ಆಗಬೇಕು?" ನನ್ನನ್ನ ಮೊದಲು ಸಮಾಜವಾದಿಯನ್ನಾಗಿ ಮಾಡಿದಮಾತುಗಳು ಅವು. ಈಗ ನೋಡಿದರೆ ಅವರು ತಮ್ಮ ಭಾಷಣದಲ್ಲಿ 'ದೇವರು'ಅನ್ನೊ ಶಬ್ದ ಬಳಸಿದ್ದರು ಅಂತೆಲ್ಲ ಅನ್ನಿಸ್ತದೆ. ಆದರೆ ಆಗ ಅದು ನನ್ನಲ್ಲಿ ದೊಡ್ಡ ಪರಿವರ್ತನೆಯನ್ನೇ ಮಾಡಿತು; ನನ್ನ ಪ್ರಪಂಚವನ್ನೇ ಬದಲಾಯಿಸಿಬಿಟ್ಟಿತು. ಪ್ರಾಯಶಃ ಇವತ್ತಿಗೂ ನಮ್ಮ ಹಳ್ಳಿಗಳಲ್ಲಿ ಇಂತಹ ಮಾತುಗಳನ್ನು ಆಡಿ ನಮ್ಮ ಜನರ ಮನಸ್ಸನ್ನು ಪರಿವರ್ತನೆ ಮಾಡೋದು ಸಾಧ್ಯ ಅಂತ ನನಗನ್ನಿಸಿದೆ; ಆದಕ್ಕೇ ನಾನು ಮಾರ್ಕ್ಸ್‌ವಾದಿಗಳ ಜೊತೆ ಜಗಳ ಆಡ್ತೇನೆ,—"ನಿಮಗೆ ನಮ್ಮ ಜನರ ಈಡಿಯಮ್ಮೇ ಗೊತ್ತಿಲ್ಲ ಅಂತ" ಯಾಕೇಂದ್ರೆ ನಮ್ಮನ್ನು ಮತ, ಧರ್ಮಗಳಿಂದ ಬಿಡುಗಡೆ ಮಾಡೋದು, ಹೊರಹಾಕೋದು ಕೂಡಾ ದೇವರ ಬಗ್ಗೆ ಇಂತಹ ಮಾತಾಗುತ್ತೆ. ಇದನ್ನು ನನ್ನ ಅನುಭವದಿಂದ ನಾನು ಹೇಳ್ತಾ ಇದೀನಿ. ಈಗ ರಾಮನಂದನ ಮಿಶ್ರ ಬಿಹಾರ್‌ನಲ್ಲಿ ಎಲ್ಲೋ ಒಂದು ಆಶ್ರಮ ಮಾಡಿಕೊಂಡು ಒಬ್ಬ ಸಂತನ ಹಾಗೆ ಬದುಕ್ತಾ ಇದಾರಂತೆ. ಗೋಪಾಲಗೌಡರು ಅವರ ಬಗ್ಗೆ ನನಗೆ ಹೇಳಿದ್ದರು. ಅವರು ಹೋಗಿ ನೋಡಿಕೊಂಡು ಬಂದಿದ್ದರು. ರಾಮನಂದನ ಮಿಶ್ರ ಆಲ್ ಇಂಡಿಯಾ ಕಿಸಾನ್‌ಸಭಾದ ಕಾರ್ಯದರ್ಶಿಗಿದ್ದರು; ಲೋಹಿಯಾ ಅವರನ್ನು ಕಳುಹಿಸಿಕೊಟ್ಟಿದ್ದರು.

ಜಿ. ಆರ್.: ನಿಮಗೆ ಲೇಖಕನಾಗಬೇಕು ಅಂತ ಯಾವಾಗ ಅನ್ನಿಸಿತು?

ಯು. ಆರ್. ಎ.: ಬಹಳ ಚಿಕ್ಕವನಿದ್ದಾಗ್ಲೇನೆ: ಹಾಗನ್ನಿಸಿದ್ದಕ್ಕೆ ಅನೇಕ ಕಾರಣಗಳಿದಾವೆ. ಯಾರಾದ್ರೂ ಕಥೆ ಹೇಳ್ತಾ ಇದ್ದರೆ, ಉಳಿದವರು ಅದನ್ನು ಮಂತ್ರಮುಗ್ಧರಾಗಿ ಕೂತು ಕೇಳುತ್ತಿರುತ್ತಾರಲ್ಲ ಅದು ವಿಶೇಷವಾದದ್ದು ಅಂತ

ನನಗೆ ಯಾವಾಗ್ಲೂ ಅನ್ನಿಸುತ್ತಿತ್ತು. ಅಂದರೆ ಕಥೆ ಹೇಳುವವನಿಗೆ, ಕಥೆ ಕೇಳುವವನ ಮೇಲೆ ಒಂದು ಪವರ್ ಇದ್ದ ಹಾಗೆ. ಇವನ ಮನಸ್ಸನ್ನು ಅವನು ವಶಪಡಿಸಿಕೊಂಡ ಹಾಗೆ ಅಂತ ಅನ್ನಿಸ್ತಿತ್ತು. ನನಗೂ ಆ ತರಹ ಕಥೆ ಕಟ್ಟಬೇಕು, ಉಳಿದವರ ಮೇಲೆ ಪ್ರಭಾವ ಮಾಡಬೇಕು ಅಂತ ಅನ್ನಿಸ್ತಿತ್ತು. ನಾನು ಚಿಕ್ಕವನಾಗಿದ್ದಾಗ ಸ್ವಲ್ಪ ದುರ್ಬಲ ಪ್ರಕೃತಿಯ ಹುಡುಗನಾಗಿದ್ದೆ: ಜೊತೆಗೆ ಸ್ವಲ್ಪ introvert. ನನಗೆ ಈ ಕಥೆ ಹೇಳೋದು ಮಾತಾಡೋದು, ಇವೆಲ್ಲ ತುಂಬ ಆಕರ್ಷಣೆಯ ವಿಷಯಗಳಾಗಿದ್ದವು. In fact ನಾನು ಸಂಸ್ಕಾರದ ಕಥೆಯನ್ನು ಅದರ ಬೀಜ ರೂಪದಲ್ಲಿ, ಅಗ್ರಹಾರದಲ್ಲಿದ್ದಾಗ್ಲೇನೆ ಬರೆದು ಬಿಟ್ಟಿದ್ದೆ; ಆದರೆ ಯಾರಿಗೂ ಅರ್ಥವಾಗದ ಹಾಗೆ ಬರೆದಿದ್ದೆ. ಯಾಕೇಂದ್ರೆ ಉಳಿದವರಿಗೆ ಅರ್ಥವಾದರೆ ಏನಂತಾರೋ ಅನ್ನುವ ಭಯ. ಅರ್ಥ ಈ ಮೆಟಾಫರ್–ರೂಪಕ ಹುಟ್ಟೋದು ಭಯದಲ್ಲೇನೆ; ಸಮಾಜದಿಂದ ಏನನ್ನಾದರೂ ಮುಚ್ಚಿಟ್ಟುಕೊಂಡು ಹೇಳಬೇಕಾದ್ದಿದೆ ಅಂತ ಅನ್ನಿಸಿದಾಗ.

ನಾನು ಬರೀಬೇಕೂ ಅಂತ ಅನ್ನಿಸಿದ್ದಕ್ಕೆ ಇನ್ನೊಂದು ಮುಖ್ಯ ಕಾರಣ ಮಡಿವಂತರಿಂದ, ನಾನು ಭಿನ್ನ ಅಂತ ತೋರಿಸಿಕೊಳ್ಳೋದು. ನಿಮಗೆ ಗೊತ್ತಿಲ್ಲ, ನಾವೆಲ್ಲ ಓದ್ತಾ ಇದ್ದಾಗ ಎಂತೆಂತಹ ಗೊಡ್ಡು ಬ್ರಾಹ್ಮಣರ ಮಧ್ಯೆ ಇದ್ದೆವು ಅನ್ನೋದು, ಈ ಬ್ರಾಹ್ಮಣರು "ಕೆ. ವಿ. ಪುಟ್ಟಪ್ಪನಿಗೆ ವೇದ ಎಲ್ಲಿ ಅರ್ಥವಾಗುತ್ತೋ?" ಅಂತ ಕೇಳೋರು. "ಇಲ್ಲ ಅವರು ವೇದ, ಉಪನಿಷತ್ತು ಎಲ್ಲವನ್ನೂ ನಿಮ್ಮೆಲ್ಲರಿಗಿಂತ ಚೆನ್ನಾಗಿ ಅರಗಿಸಿ ಕೊಂಡಿದ್ದಾರೆ" ಅಂತ ಹೇಳೋದೆ ನಮ್ಮಂತಹ ಹೊಸಕಾಲದ ಬ್ರಾಹ್ಮಣ ಹುಡುಗರಿಗೆ ಒಂದು ದೊಡ್ಡ ಖುಷಿ. ಅವರೂ ನಾವು ಹೇಳಿದ್ದನ್ನು ನಂಬುತ್ತಿದ್ದರು. "ಹೌದಾ" ಅಂತ ತಲೆದೂಗಿ ಆಶ್ಚರ್ಯ ಪಟ್ಟುಕೊಳ್ಳುತ್ತಿದ್ದರು. ಅವರೇನೂ ಕೆಟ್ಟವರಾಗಿರಲಿಲ್ಲ; ಮುಗ್ಧರು ಅಷ್ಟೇ. ಸಾಹಿತ್ಯ ಅಂದರೆ ಆಗ ನಮಗೆ, ನಾವು ತಿಳಿದಿದ್ದ ನಮ್ಮ ಜಾತಿಯ ಜೀವನದ ಅನುಭವವನ್ನು ವಿಸ್ತರಿಸಿಕೊಳ್ಳುವ ಸಾಧನವಾಗಿತ್ತು. ನಮಗೆ ಬರವಣಿಗೆ ಓದು ಎಲ್ಲ ಒಂದು ತರಹದ ರೆಬೆಲ್ಲಿಯನ್-youth against old age ಆಗ ಕನ್ನಡದ್ದು ಏನಾದರೂ ಓದೋದೆ ಒಂದು ದೊಡ್ಡ ವಿಷಯವಾಗಿತ್ತು. ನಾನು ಲೋವರ್ ಸೆಕೆಂಡರಿ ಪರೀಕ್ಷೆಯಲ್ಲಿ ಫಸ್ಟ್‌ಕ್ಲಾಸಲ್ಲಿ ಪಾಸುಮಾಡಿದ್ದಕ್ಕೆ ಅಂತ ನನಗೆ ಒಂದು ಪ್ರೈಜು ಬಂತು. ಅದಕ್ಕೆ "ಪ್ರಭುಲಿಂಗ ಲೀಲೆಯ ಸಂಗ್ರಹ" ಅಂತ ಒಂದು ಪುಸ್ತಕ ಕೊಟ್ಟರು. ಆ ಅಗ್ರಹಾರದಲ್ಲಿ ಅದನ್ನು ನೋಡಿ, "ಥೂ ಇದೆಂತಹ ಪುಸ್ತಕಾನೋ? ಪ್ರಭುಲಿಂಗ ಲೀಲೆಯಂತೆ? ಕನ್ನಡ ಪುಸ್ತಕ ಕೊಟ್ಟಿದ್ದಾರ ಅಂತ ನಕ್ಕುಬಿಟ್ಟರು. ಹೀಗಾಗಿ ನಮಗೆ ಕನ್ನಡದಲ್ಲಿ ಬರೆಯುವುದು ಓದುವುದು ಅಂದರೆ, ನಮ್ಮ ಮೇಲೆ ಅಧಿಕಾರ ಚಲಾಯಿಸುವ ಅಗ್ರಹಾರದ ನಮ್ಮ ಹಿರಿಯರ

ವಿರುದ್ಧ ಸೆಟೆದು ನಿಂತ ಹಾಗೆ ಅಂತ ಅನ್ನಿಸ್ತಿತ್ತು. ಬರವಣಿಗೇಲಿ ಈ ಆಕರ್ಷಣೆಗಳೂ ಇರ್ತಾವೆ. ನಾವು ಬೆಳೀತಾ ಹೋದಹಾಗೆ ಬರವಣಿಗೆಯ ಉದ್ದೇಶಗಳು ಬೇರೆ ಬೇರೆ ಆಗ್ತಾ ಹೋಗಬಹುದು; ಆದಾಗ್ಲೂ ಅದು ಒಂದು ವೈಯಕ್ತಿಕ ಅಗತ್ಯವಾಗಿಯೇ ಉಳಿದಿರುತ್ತೆ.

ಜಿ. ಆರ್. : ನಿಮ್ಮ ಬಯೋಡಾಟ ಅರ್ಥಕ್ಕೇ ನಿಲ್ಲಿಸಿದಿರಲ್ಲ ?

ಯು. ಆರ್. ಎ. : ತೀರ್ಥಹಳ್ಳಿಯಲ್ಲಿ ಹೈಸ್ಕೂಲು ಮುಗಿಸಿದ ನಂತರ ಶಿವಮೊಗ್ಗದಲ್ಲಿ ಓದಿದೆ. ನಾನು ರೈಲು ಎಲೆಕ್ಟ್ರಿಸಿಟಿ ಎಲ್ಲ ನೋಡಿದ್ದು ಶಿವಮೊಗ್ಗದಲ್ಲೇನೆ. ನಮ್ಮ ಅಪ್ಪ ಅಲ್ಲೆ ಒಂದು ಪ್ರೆಸ್ ಇಟ್ಟಿದ್ದರು. ನಮ್ಮ ಅಪ್ಪನಿಗೆ ಸಮಾಜವಾದದ ಒಲವೂ ಇದ್ದಿದ್ದರಿಂದ, ನಮ್ಮ ಪ್ರೆಸ್ ಸೋಷಿಲಿಸ್ಟರು ಸೇರುವ ಒಂದು ಸ್ಥಳವಾಗಿತ್ತು ನಮ್ಮ ಪ್ರೆಸ್‌ನ ಅಟ್ಟದಲ್ಲೇನೆ, ನಾನು ಗೋಪಾಲಗೌಡರನ್ನು ಮೊದಲು ಸಂಧಿಸಿದ್ದು. ನನ್ನ ಮೇಲೆ ತುಂಬ ಪ್ರಭಾವ ಮೂಡಿಸಿದವರಲ್ಲಿ ಗೌಡರೂ ಒಬ್ಬರು. ಅವರಿಗೆ ರಾಜಕೀಯದಲ್ಲಿದ್ದಷ್ಟೇ ಆಸಕ್ತಿ ಸಾಹಿತ್ಯದಲ್ಲಿಯೂ ಇತ್ತು. ಅಡಿಗರ ಭೂಮಿಗೀತಕ್ಕೆ ನಾನು ಮುನ್ನುಡಿ ಬರೆದಾಗ, ಅದನ್ನು ನಾನು ಗೌಡರ ಜೊತೆ ಚರ್ಚಿಸಿದ್ದೆ. ಶಿವಮೊಗ್ಗದಲ್ಲಿದ್ದಾಗ್ಲೇನೆ ಕಾಗೋಡು ಸತ್ಯಾಗ್ರಹವೂ ಶುರುವಾಯಿತು. ಅದರ ಹೆಚ್ಚಿನ ಕರಪತ್ರಗಳು ನಮ್ಮ ಪ್ರೆಸ್‌ನಲ್ಲಿಯೇ ಪ್ರಿಂಟಾದವು. ಕೆಲವನ್ನು ನಾನೇ ಡ್ರಾಫ್ಟ್ ಮಾಡಿದ್ದೆ. ಗಣಪತಿಯಪ್ಪ, ಸದಾಶಿವರಾಯರು, ಇನ್ನೂ ಅನೇಕರು ಆ ಸತ್ಯಾಗ್ರಹದ ಲೀಡರ್ಸ್ ಆಗಿದ್ದೋರು ನಮ್ಮ ಪ್ರೆಸ್ಸಿಗೆ ಬರ್ತಾ ಇದ್ದರು. ಆಗ್ಲೇ ನನಗೆ ರಾಜಕೀಯದ ತಾತ್ವಿಕತೆಯ ಜೊತೆಗೆ, ನಿತ್ಯದ ರಾಜಕಾರಣದ ಪಟ್ಟುಗಳು, ಕುತಂತ್ರಗಳು, ಚಾಣುಕ್ಯತನ— ಎಲ್ಲದರ ಪರಿಚಯವಾದದ್ದು. ಬಹುಷಃ ಯಕ್ಷಗಾನ ಮೇಳಗಳನ್ನು ಬಿಟ್ಟರೆ, ರಾಜಕೀಯದಲ್ಲೇ, ನಿಮಗೆ ಎಲ್ಲ ಜಾತಿಗಳ, ಎಲ್ಲ ತರಹದ ಸ್ವಭಾವಗಳ ಜನರ ಪರಿಚಯವಾಗೋದು. ಆದರೆ ನನ್ನ ಈ ಆಸಕ್ತಿಗಳಿಂದ, ಇಂಟರ್‌ಮಿಡಿಯೆಟ್‌ನಲ್ಲಿ ನಾನು ಫೇಲಾದೆ. ಅದರಿಂದ ಒಳ್ಳೇದೆ ಆಯ್ತು ಅನ್ನಿ. ಯಾಕೆಂದ್ರೆ ಆನರ್ಸ್‌ನಲ್ಲಿ ಸೈನ್ಸ್ ಬದಲು ಸಾಹಿತ್ಯ ತಗೊಳ್ಳೋದಕ್ಕೆ ನಮ್ಮ ಅಪ್ಪನನ್ನು ಒಪ್ಪಿಸಿದೆ; ಅವರಿಗೆ ನಾನು ಗಣಿತ ಓದಬೇಕೂ ಅಂತ ಆಶೆ ಇತ್ತು. ಮೊದಲ ಆನರ್ಸ್‌ನಲ್ಲಿ ಮತ್ತೆ ಫೇಲಾದೆ. ಅಂದರೆ ಪರೀಕ್ಷೆ ಪಾಸು ಮಾಡಿದ್ದೆ; ಆದರೆ ಅಟೆಂಡೆನ್ಸ್ ಸಾಕಾಗದೆ ಮತ್ತೊಂದು ವರ್ಷ ಕ್ಲಾಸಿಗೆ ಹೋಗಿ ಕೂರಬೇಕಾಯಿತು. ಕ್ಲಾಸಿಗೇ ಹೋಗುತ್ತಿರಲಿಲ್ಲ ನಾನು (ನಗು). ಶಿವಮೊಗ್ಗದಲ್ಲಿದ್ದಾಗ್ಲೇನೆ ನನಗೆ ಸುಬ್ಬಣ್ಣ (ಕೆ. ವಿ.) ಪರಿಚಯವಾಯಿತು; ಕನ್ನಡ ಸಾಹಿತ್ಯದ ದೊಡ್ಡ ಕೃತಿಗಳನ್ನು ನನಗೆ ಪರಿಚಯ ಮಾಡಿಕೊಟ್ಟವರು ಸುಬ್ಬಣ್ಣ. ನನ್ನ ಬಾಲ್ಯ

ದಿಂದಲೂ ನನ್ನ ಆಸಕ್ತಿಗಳು ಒಂದೇ ತರಹದ್ದಾಗಿ ಉಳಿದಿದಾವೆ. ಸಾಹಿತ್ಯ ಸಮಾಜವಾದ, ಧರ್ಮ—ಇವು ನಾನು ಸದಾ ಯೋಚಿಸುವ ವಿಷಯಗಳಾಗಿ ಇವತ್ತಿಗೂ ಉಳಕೊಂಡಿವೆ. ನನ್ನ ಆಸಕ್ತಿಗಳಲ್ಲಿ ಒಂದು consistancy ಇದೆ. ಶಿವಮೊಗ್ಗದಲ್ಲಿದ್ದಾಗ, ಭದ್ರಾವತಿಯಿಂದ ಬರ್ತಾ ಇದ್ದ ಒಬ್ಬ ಕಮ್ಯೂನಿಸ್ಟ್ ಟ್ರೇಡ್ ಯೂನಿಯನಿಸ್ಟನ ಪರಿಚಯವೂ ನನಗೆ ಆಯಿತು. ನಾನು ಸ್ವಲ್ಪ ಕಮ್ಯೂನಿಸಂ ಕಡೆ ಆಕರ್ಷಿತನಾದೆ. ನಮ್ಮ ಅಪ್ಪ ಕಮ್ಯೂನಿಸ್ಟರು ಬಂದರೆ ಎಲ್ಲ ಕೆಟ್ಟು ಹೋಗುತ್ತೆ ಅಂತ ಹೇಳ್ತಾ ಇದ್ದರು. ಒಂದು ದಿನ ನಾವು ಊಟಕ್ಕೆ ಕೂತಾಗ ನಾನು ರಷ್ಯಾ ದೇಶದ ಝಾರ್ ದೊರೆಗಳ ಬಗ್ಗೆ ಹೇಳಿದೆ. ನಮ್ಮ ಅಪ್ಪ ಸಿಟ್ಟಿನಲ್ಲಿ ಎದ್ದು ಬಂದು, "ಝಾರ್ ಅಂತೆ ಝಾರ್" ಎಂದು ಎಂಜಲು ಕೈಯಲ್ಲಿಯೇ ನನ್ನ ಕಪಾಳಕ್ಕೆ ಹೊಡೆದರು. ನಾನು "ನೀವು ನನಗೆ ಹೊಡೆದ ತಕ್ಷಣ ರಷ್ಯಾದಲ್ಲಿ ಆಗಿದ್ದೆಲ್ಲ ಸುಳ್ಳಾಗಿ ಬಿಡುತ್ತಾ ?" ಎಂದು ಕೇಳಿದೆ.

ಜಿ. ಆರ್. : "ಸಂಸ್ಕಾರ" ನಿಮ್ಮ ತಂದೆಗೆ ಇಷ್ಟವಾಗಲಿಲ್ಲವಂತೆ ಹೌದಾ ?

ಯು. ಆರ್. ಎ. : ಇಲ್ಲ. ಅವರಿಗೆ ಅದು ಇಷ್ಟವಾಯಿತು. ನನ್ನ ಮದುವೇನ ಅವರು ಒಪ್ಪಿಕೊಂಡಿರಲಿಲ್ಲ; ಆದರೆ ನನ್ನ ಮಗ ಹುಟ್ಟಿದ ಮೇಲೆ ಒಪ್ಪಿಕೊಂಡರು. ಅವನು ಹುಟ್ಟಿದ ಸುದ್ದಿ ತಲುಪಿದ ಕೂಡಲೇ ಅವನದ್ದೊಂದು ಜಾತಕ ಮಾಡಿ ಕಳುಹಿಸಿಕೊಟ್ಟರು. ಬಹಳ ವೈವಿಧ್ಯಮಯವಾದ, ಅನೇಕ ದ್ವಂದ್ವಗಳಿದ್ದ ಬದುಕನ್ನ ಬಾಳಿದವರು ಅವರು. ನನಗೆ ಈಗಲೂ ಚೆನ್ನಾಗಿ ನೆನಪಿದೆ. ಅವರ ಕೊನೆಗಾಲದಲ್ಲಿ ಅವರ ಹತ್ತಿರ ಇದ್ದದ್ದು ಎರಡೇ ವಸ್ತುಗಳು. ಒಂದು ಪಂಚಾಂಗ, ಇನ್ನೊಂದು The Ailments of Human Body ಅನ್ನೋ ಪುಸ್ತಕ. ಕಾಲಲ್ಲಿ ಏನೋ ನೋವು ಕಾಣಿಸ್ತು, ಆ ಹ್ಯೂಮನ್ ಬಾಡಿ ಪುಸ್ತಕ ತೆಗೆದು ನೋಡಿ ತನ್ನ ಶರೀರಕ್ಕೆ ಏನಾಗಿದೆ ಅಂತ ತಿಳಕೊಳ್ಳೋದು. ಪಂಚಾಂಗ ಬಿಡಿಸಿ ತಿಥಿ ನಕ್ಷತ್ರ ನೋಡೋದು. ಅದಕ್ಕೂ ಇದಕ್ಕೂ ತಾಳೆ ಹಾಕಿ ತನಗೆ ಮುಂದೆ ಏನಾಗಬಹುದು ಅಂತ ಕಂಡುಕೊಳ್ಳೋದು. ಅವೆರಡು, ತನ್ನ ಕೊನೆಗಾಲದಲ್ಲಿ ಅವರ ಐಹಿಕ, ಪಾರಮಾರ್ಥಿಕ ಅಗತ್ಯಗಳಿಗೆ ಅವರಿಟ್ಟುಕೊಂಡಿದ್ದ ಎರಡು ವಸ್ತುಗಳ ಹಾಗೆ ನನಗೆ ಕಾಣಿಸುತ್ತದೆ (ನಗು).

ಜಿ. ಆರ್. : ನಿಮ್ಮ ಬಾಲ್ಯವನ್ನು ಇವತ್ತಿಗೆ ಹೋಲಿಸಿದರೆ ನಿಮಗೆ ಕಾಲ ಕೆಟ್ಟು ಹೋಗಿದೆ ಅಂತ ಅನ್ನಿಸುತ್ತಾ ? ಯಾಕೆ ಕೇಳಿದೆ ಅಂದರೆ ಇವತ್ತು ನಮ್ಮ ಅನೇಕ ಲೇಖಕರಿಗೆ ಇದು ಅವನತಿಯ ಕಾಲ ಅನ್ನಿಸಿದೆ. ನಿಮಗೂ ಹಾಗನ್ನಿಸಿದೆಯಾ ? ಇದು decline ಅಂತ ಅನ್ನಿಸಿದೆಯಾ ?

ಯು. ಆರ್. ಎ. : ಇಲ್ಲ. ಯಾಕೇಂದ್ರೆ ಇಂಡಿಯಾದಲ್ಲಿ ಇದು ಪ್ರಗತಿಯ ಕಾಲ ಅಥವಾ ಅವನತಿಯ ಕಾಲ ಅಂಥ ಸ್ಪಷ್ಟವಾಗಿ ಹೇಳೋದು ಸಾಧ್ಯಾನೇ ಇಲ್ಲ. ಕೇವಲ ಪ್ರಗತಿ ಅಥವಾ ಕೇವಲ ಅವನತಿ—ಈ ಎರಡೂ ಸಿಂಪ್ಲಿಫಿಕೇಷನ್ಸ್ ಆಗಿ ಬಿಡ್ತಾವೆ. ಯಾಕೆ ಅಂದರೆ ನನಗೆ ಕಾಲ ಬಹಳ ದುಷ್ಟವಾಗಿದೆ ಅಂತ ಅನ್ನಿಸೋ ಈ ಹೊತ್ತಿನಲ್ಲೇನೆ ಜೀತದಿಂದ ಬಿಡುಗಡೆಯಾದ ಒಬ್ಬ ಜೀತದಾಳಿಗೆ ಈ ಕಾಲವೇ ಅತ್ಯುತ್ತಮವಾದ ಕಾಲ ಅಂತಲೂ ಅನ್ನಿಸಬಹುದು. ನಾನು ಒಬ್ಬ ಜೀತದಾಳಿನ ಮಗನಾಗಿದ್ದಿದ್ದರೆ ಮತ್ತು ನಾನು ಸೂಕ್ಷ್ಮಜ್ಞನೂ ಆಗಿದ್ದರೆ, ನನಗೆ ಇದೇ ದೊಡ್ಡ ಕಾಲ. ವಸ್ತುನಿಷ್ಠ ವಿಶ್ಲೇಷಣೆ ಅಲ್ಲ ನಾನು ಹೇಳ್ತಾ ಇರೋದು. Subjective experience ಬಗ್ಗೆ ಹೇಳ್ತಾ ಇದೀನಿ. ಒಬ್ಬ ಲೇಖಕನಾಗಿ ನನಗೆ ವಸ್ತುನಿಷ್ಠ ತಿಳಿವಳಿಕೇನೂ ಬೇಕು; ಹಾಗೇನೇ ಆತ್ಮನಿಷ್ಠವಾದ ಅನುಭವಗಳನ್ನೂ ನಾನು ಗುರುತಿಸಬೇಕು. ನನ್ನ ಲೋಕ ದೃಷ್ಟಿಗೆ ಅವೆರಡೂ ಅಗತ್ಯ. ಈಗ ಇಂದಿರಾಗಾಂಧಿ ಮಾಡಿದ ಬ್ಯಾಂಕು ರಾಷ್ಟ್ರೀಕರಣ ನೋಡಿ, ಯಾವುದೇ ಉದ್ದೇಶದಿಂದ ಆಕೆ ಅದನ್ನು ಮಾಡಿರಲಿ, ಇನ್ನು ಯಾವ ಸರಕಾರ ಬಂದರೂ ಅದರಿಂದ ಹಿಂದಕ್ಕೆ ಹೋಗೋಕಾಗೋದಿಲ್ಲ. ಅದು ಸರಿಯಾದ ಸಮಾಜವಾದ ಅಲ್ಲ ಅನ್ನೋಣ; ಆಕೆ ಮಾಡಬಹುದಾದ್ದನ್ನೆಲ್ಲ ಮಾಡಲಿಲ್ಲ ಅನ್ನೋಣ. ಆದರೆ ಅದು ಆ ದಿಕ್ಕಿನಲ್ಲಿ ಒಂದು ಹೆಜ್ಜೆ. ಇಂಡಿಯಾದಲ್ಲಿ ಇವತ್ತು ಬಹಳ ಜನ ಅನೇಕ ಕಾರಣಗಳಿಂದ, ಅನೇಕ ರೀತಿಗಳಲ್ಲಿ ಬಿಡುಗಡೆ ಹೊಂದಿದ್ದಾರೆ. ಈ ಬದಲಾವಣೆಯಲ್ಲಿ ಕೆಲವರಿಗೆ ಕಾಲ ತಮ್ಮ ಪರವಾಗಿದೆ ಅಂತ ಅನ್ನಿಸಬಹುದು: ಕೆಲವರಿಗೆ ಬದಲಾವಣೆ ಸಾಕಷ್ಟು ವೇಗವಾಗಿ ಆಗ್ತಾ ಇಲ್ಲ ಅಂತಲೂ ಅನ್ನಿಸಬಹುದು. ಆದರೆ ಬದಲಾವಣೆಗಳು ಆಗ್ತಾ ಇರೋದು ನಿಜ. ಇದರಲ್ಲೇ ಕೆಲವರು ತಮಗಿರೋ ಸ್ಥಾನಮಾನ ಸವಲತ್ತುಗಳನ್ನು ಕಳಕೋತಾನೂ ಇದಾರೆ. ಸೂಕ್ಷ್ಮಜ್ಞರು ಹೆಚ್ಚಾಗಿ ಈ ಕಳಕೊಂಡವರ ಜಾತಿಗಳಿಂದ, ವರ್ಗಗಳಿಂದ ಬಂದವರಾದ್ದರಿಂದ ಅವರಿಗೆ ಅದು ಅವನತಿ ಅಂತ ಕಾಣಿಸಬಹುದು. ಆದರೆ ಅದು ಒಂದು ಸಿಂಪ್ಲಿಫಿಕೇಷನ್; ಸರಿಯಲ್ಲ ಅದು.

ಜಿ. ಆರ್. ನಿಮ್ಮ ಬ್ರಾಹ್ಮಣ್ಯ ನಿಮ್ಮ ಬರವಣಿಗೆಗೆ ಒಂದು ತೊಡಕು ಅಂತ ಅನ್ನಿಸಿದೆಯಾ ?

ಯು. ಆರ್. ಎ. : ಹಾಗೆ ಒಬ್ಬನ ಜಾತಿಯಿಂದ ಬರವಣಿಗೆಗೆ ತೊಡಕಾಗುತ್ತೆ ಅಂತ ಹೇಳೋಕಾಗೋಲ್ಲ. ತೊಡಕು ಅಂತ ಕಂಡದ್ದು ದಾಟಬೇಕಾದ, ಮೀರಬೇಕಾದ ಒಂದು ಕಷ್ಟ. ಎಲ್ಲ ಮನುಷ್ಯರ ಸಾಧನೆಯೂ ಮಿತಿ ಮತ್ತು ಸಾಧ್ಯತೆಗಳ ನಡುವೆ ನಡೆಯುವಂತಹದ್ದು. ಇದು ಒಂದೊಂದು ಜಾತಿಗೂ ಒಂದೊಂದು

ರೂಪದಲ್ಲಿ ಬರಬಹುದು. ಬ್ರಾಹ್ಮಣನಾದವನಿಗೆ, ಅವನ ಜಾತಿಯು ಅನುಕೂಲ ಗಳೂ ಇವೆ. ಹಾಗೆಯೇ ಬ್ರಾಹ್ಮಣೇತರನಾದವನಿಗೂ. necessity and Freedom ಬಗ್ಗೆ ನಾನು ಹೇಳ್ತಾ ಇದ್ದೀನಿ. ನನಗೆ, ಒಂದು ಸಲ ಬ್ರಾಹ್ಮಣೇತರ ನಾದ ಒಬ್ಬ ಹುಡುಗ ಒಂದು ವಿಷಯ ಹೇಳಿದ್ದ. ಅವನಿಗೆ ಸಾಹಿತ್ಯದಲ್ಲಿ ಆಸಕ್ತಿ ಇತ್ತು. ಅವನು ತುಂಬ ಬಡವರ ಮನೆಯಿಂದ ಬಂದವನು. ಅವನ ಮನೆಯಲ್ಲಿ ರಾತ್ರಿ ಎಂಟುಗಂಟೆಯ ನಂತರ ದೀಪ ಉರಿಸೋ ಹಾಗಿರಲಿಲ್ಲವಂತೆ. ಎಂಟುಗಂಟೆಯ ನಂತರವೂ ದೀಪ ಉರಿಸಿ ನಾನು ಓದಬೇಕಾದ್ದಿದೆ, ತಿಳಿದುಕೊಳ್ಳಬೇಕಾದ್ದಿದೆ ಅಂತ ಅವನ ಮನೆಯವರನ್ನು ಒಪ್ಪಿಸುವುದೇ ಅವನಿಗೆ ಒಂದು ಹೋರಾಟವಾಗಿತ್ತು. ಹಾಗೇನೆ ಬ್ರಾಹ್ಮಣ ಲೇಖಕನಾದವನಿಗೂ ಕೆಲವು ತೊಡಕುಗಳಿದಾವೆ. ಭಾಷೆಯನ್ನು ಅದರ ಅತ್ಯಂತ ಸಜೀವತೆಯಲ್ಲಿ ಬಳಸಬೇಕು ಎಂದಾಗ ಅವನಿಗೆ ಮುಜುಗುರವಾಗಬಹುದು. ಅಂದರೆ ಸ್ವಚ್ಛವಾದ ಭಾಷೆಯ ಹಿನ್ನೆಲೆಯಿಂದ ಬಂದವನಿಗೆ ಅದು ತನ್ನದಲ್ಲ ಅನ್ನುವ ಸಂಕೋಚವೂ ಆಗಬಹದು. ಹೀಗೆ ಪ್ರತಿಯೊಂದು ಜಾತಿಗೂ ಅದರದ್ದೇ ಸಾಧ್ಯತೆಗಳು ಮತ್ತು ಮಿತಿಗಳು ಇದ್ದೇ ಇವೆ. ಆದ್ದರಿಂದ ಲೇಖಕನಾದವನಿಗೆ ಯಾವುದೇ ಜಾತಿ ಸ್ಪೆಷಲ್ ಅಂತ ನಾನು ತಿಳಿಯೋಲ್ಲ

ಜಿ. ಆರ್.: ನೀವು ಉಡುಪಿಯಲ್ಲಿ ಹಿಂದೊಮ್ಮೆ ಮಾಡಿದ್ದ ಭಾಷಣದಲ್ಲಿ ತನ್ನ ವರ್ಗವನ್ನು ಮೀರಿ ಹೊರಬರಲು ಆರ್ವೆಲ್ ಮಾಡಿದ್ದ ಪ್ರಯತ್ನಗಳ ಬಗ್ಗೆ ಹೇಳಿದ್ದೀರಿ. ನಿಮ್ಮ ಸ್ವಂತ ಜೀವನದಲ್ಲಿ ನಿಮಗೆ ಆ ತರಹದ ಪ್ರಯತ್ನ ಮಾಡಬೇಕು ಅಂತ ಅನ್ನಿಸಿದೆಯಾ ? ಈಗಿನ ನಿಮ್ಮ ಮಧ್ಯಮವರ್ಗ ಬಿಟ್ಟು ಹೊರ ಬರಬೇಕು ಅನ್ನಿಸಿದೆಯೆ?

ಯು. ಆರ್. ಎ: ಬಹಳ ಅನ್ನಿಸಿದೆ; ನನಗೆ ಯಾವಾಗಲೂ ಹಾಗೆ ಅನ್ನಿಸ್ತಾ ಇರುತ್ತೆ. ಪ್ರಾಯಶಃ ನಾನು ಮಾಡುವ ಪ್ರತಿಯೊಂದು ಕೂಡಾ ಇದರಲ್ಲಿ ಒಳಗಾಗದೆ, ಇದರಿಂದ ಸಂಪೂರ್ಣ ಬಂಧಿತನಾಗದೇ ಇರೋದುಕ್ಕೆ. ನಾನು ಆ ಬಗ್ಗೆ ಮಾಡಬೇಕಾದಷ್ಟು ಪ್ರಯತ್ನ ಮಾಡಿದೀನಿ ಅಂತ ಅನ್ನಿಸಲಿಲ್ಲ; ಆ ಮಾತು ಬೇರೆ. ಆದರೆ ನಮ್ಮ ಲೇಖಕರಲ್ಲಿ ಅನೇಕರು ತಮ್ಮ ತಮ್ಮ ವರ್ಗಗಳಲ್ಲೇ ಸಿಕ್ಕಿ ಹಾಕಿಕೊಳ್ಳದೇ ಇರುವುದಕ್ಕೆ ಪ್ರಯತ್ನ ಪಟ್ಟಿದಾರೆ. ಬಹುಶಃ ನಮ್ಮ ದೇಶದಲ್ಲಿ, ರಾಜಕೀಯದಲ್ಲಿ ಅಂದರೆ broader ರಾಜಕೀಯದಲ್ಲಿ ಆಸಕ್ತನಾಗಿರೋದರ ಮುಖಾಂತರ ನೀವು ನಿಮ್ಮ ಸಣ್ಣ ವರ್ಗದ ಮಿತಿಯಲ್ಲಿ

ಸಿಕ್ಕಿಬೀಳುವುದಿಲ್ಲ. ಅದಕ್ಕೇ ನನಗೆ ಈ ರಾಜಕಾರಣಿಗಳನ್ನು ಅವರು ಯಾವ ಪಕ್ಷದವರೇ ಇರಲಿ,—ಕಂಡರೆ ಇಷ್ಟ. ಒಬ್ಬ ಎಂ. ಎಲ್. ಎ., ಅವನು ಎಷ್ಟೇ ಭ್ರಷ್ಟನಾಗಿರಲಿ. ಹಲವು ತರಹದ ಜನರೊಡನೆ ಅವನು ಸಂಪರ್ಕ ಇಟ್ಟುಕೊಳ್ಳಲೇ ಬೇಕಾಗುತ್ತದೆ. ಆದರೆ ಅಧಿಕಾರಿ ವರ್ಗ, bureaucrats ಇವ್ರಾರೆ ನೋಡಿ. ಅವರು ಜನರಿಂದ ಯಾವಾಗ್ಲೂ ದೂರಾನೇ ಇರ್ತಾರೆ; ತಮ್ಮದೇ ವರ್ತುಲದಲ್ಲಿ ಇದ್ದುಬಿಡುತ್ತಾರೆ. ಆದರೆ ನಮ್ಮಲ್ಲಿ ಅಧ್ಯಾಪಕರಿಗೆ ಈ ಅಪಾಯ ಅಷ್ಟಿಲ್ಲ ಅಂತ ನನ್ನ ಅನುಭವ. ಯೂರೋಪಿನಲ್ಲಿ ಅಧ್ಯಾಪಕನಾಗಿರುವುದಕ್ಕಿಂತ ಇಲ್ಲಿ ಅಧ್ಯಾಪಕನಾಗಿರೋನಿಗೆ ಇರುವ ಅನುಕೂಲ ಇದು. ಇಲ್ಲಿ ಅಧ್ಯಾಪಕನ ಕೆಲಸ ಸಿಗೋದಕ್ಕೇ, ಆತ ನೂರು ಜನರನ್ನು ನೋಡಿರಬೇಕಾಗುತ್ತೆ (ನಗು), ಅಲ್ಲದೆ ನಮ್ಮ ಮಧ್ಯಮವರ್ಗ ಅಂದರೆ ಆರ್ವೆಲ್‌ನ ಮನಸ್ಸಿನಲ್ಲಿದ್ದ ಮಧ್ಯಮ ವರ್ಗ ಅಲ್ಲ ಅನ್ನೋದನ್ನ ನೀವು ಮರೀಬಾರದು. ಅಕ್ಕಿ ಬೆಲೆ ಏರಿದರೆ, ಸೀಮೆ ಎಣ್ಣೆಗೆ ಪರದಾಟವಾದರೆ ಇವರಿಗದು ತಟ್ಟುತ್ತದೆ. ಆದ್ದರಿಂದ ಒಬ್ಬ ರಿಕ್ಷಾ ಡ್ರೈವರನಿಗೂ ಅಧ್ಯಾಪಕನಿಗೂ ವ್ಯತ್ಯಾಸಗಳಿದ್ದರೂ ಕೆಲವು ಸಾಮಾನ್ಯ ಅನುಭವಗಳೂ ಇರುತ್ತವೆ. ಬೇರೆ ಏನು ಅಲ್ಲದಿದ್ದರೂ ನಾವು ಪ್ರತಿನಿತ್ಯ, ಪ್ರತಿಕ್ಷಣ ಇವರನ್ನು ನೋಡ್ತಾ ಇರ್ತೀವಿ. ಆದ್ದರಿಂದ ಇಂಡಿಯಾದಲ್ಲಿ ವಿಪರೀತ ಶ್ರೀಮಂತರಾಗಿರುವವರನ್ನು ಬಿಟ್ಟರೆ, ಬೇರೆ ಯಾರೂ exclusive ಆಗಿ ಇರೋದು ಸಾಧ್ಯವೇ ಇಲ್ಲ. No intellectual can live in an ivory tower here. ಅದು ಹಾಗಿರೋದು ಒಳ್ಳೆಯದು. ಅಮೆರಿಕಾದಲ್ಲಿ ಯಾವುದೋ ಒಂದು ಕ್ರೈಸಿಸ್, ಉದಾಹರಣೆಗೆ ವಿಯಟ್ನಾಂ ಯುದ್ಧ—ಬಂದಾಗ ಅಲ್ಲಿನ ಬುದ್ಧಿಜೀವಿಗಳಿಗೆ ಗೊತ್ತಾಗಿ ಬಿಡುತ್ತೆ—"We are sailing on the same boat" ಅಂತ. ನಮ್ಮ ದೇಶದಲ್ಲಿ ಇದು ನಮಗೆ ಪ್ರತಿನಿತ್ಯದ ಅನುಭವವಾಗಿರುತ್ತೆ. ಅಸೂಕ್ಷ್ಮರಾದರೆ ಏನೂ ಗೊತ್ತಾಗದೆ ಹೋಗಬಹುದು; ಆದರೆ ಸೂಕ್ಷ್ಮಜ್ಞನಿಗಂತೂ ಎಲ್ಲ ತಟ್ಟಿಯೇ ತಟ್ಟುತ್ತದೆ.

ಜಿ. ಆರ್. : ಸರ್, ನನಗೆ ಕನ್ನಡದ ಮೂರು skepticsನಲ್ಲಿ ನೀವೂ ಒಬ್ಬರು great ಅಂತ ಅನ್ನಿಸುತ್ತೆ. ಉಳಿದ ಇಬ್ಬರು of course ಕಾರಂತರು ಮತ್ತು ಅಡಿಗರು. ಆದರೆ ಕಾರಂತರಿಗೆ ಯಾವುದೇ ಕ್ರಾಂತಿಯಿಂದ ಮನುಷ್ಯ ಬದಲಾಗ್ತಾನೆ ಅನ್ನುವುದರಲ್ಲಿ ವಿಶ್ವಾಸವಿಲ್ಲ. ಅಡಿಗರskepticism ಅವರ ಕಾವ್ಯವನ್ನು ಕಾಪಾಡಿದೆ. ಅವರ ರಿಯಾಕ್ಷನರಿ ರಾಜಕೀಯ ಅವರ ಕಾವ್ಯದ ಉತ್ಸಾಹ ಆಗಲಿಲ್ಲ. ಆದರೆ ನೀವು ಕಾರಂತರ ಐಡಿಯಾಲಜಿಯನ್ನು ಒಪ್ಪಿಕೊಳ್ಳುವವರಲ್ಲ. ಅಡಿಗರ ಹಾಗೆ ರಿಯಾಕ್ಷನರಿಯೂ ಅಲ್ಲ. you are an avowed

socialist ಮತ್ತು ಆ ಐಡಿಯಾಲಜಿಯ ಒಂದು intrinsic ಗುಣ ಅಂದರೆ ಭವಿಷ್ಯದಲ್ಲಿ ನಂಬಿಕೆ, ಉತ್ಸಾಹ. ಆದರೆ ಇತ್ತೀಚೆಗೆ ನಿಮಗೆ ಸಮಾಜವಾದದ ಬಗ್ಗೆಯೂ ಅಷ್ಟೊಂದು ಉತ್ಸಾಹ ಇರೋ ಹಾಗೆ ಕಾಣಿಸುವುದಿಲ್ಲ. ನಿಮ್ಮ "ಅವಸ್ಥೆ"ಯ ಕೆಲವು ಭಾಗಗಳನ್ನು ಓದಿದಾಗಲೂ ಹಾಗೇ ಅನ್ನಿಸುತ್ತೆ. ನನಗೆ ನೀವೊಬ್ಬ "socialist skeptic" ಅಂತ ಅನ್ನಿಸಿದೆ ನೀವು ಏನು ಹೇಳುತ್ತೀರಿ ?

ಯು. ಆರ್. ಎ. : ಬಹಳ ಮುಖ್ಯವಾದ ಪ್ರಶ್ನೆ ಇದು. ನನಗೆ ಅನುಭವಗಳಾಗಿದಾವೆ. ಸೋಷಿಯಲಿಸ್ಟ್ ದೇಶಗಳಿಗೆ ನಾನು ಈಚೆಗೆ ಹೋಗಿ ಬಂದಾಗ, ನಾವೆಲ್ಲ ತಿಳಿದ ಹಾಗೆ ಸೋಷಿಯಲಿಸಂ ನಮ್ಮನ್ನು ನಿಜವಾಗಿಯೂ ಬಿಡುಗಡೆ ಮಾಡುತ್ತೆ ಅನ್ನುವುದರ ಬಗ್ಗೆ ಅಷ್ಟು ಉತ್ಸಾಹವನ್ನು ತೋರಿಸಿಕ್ಕಾಗದೆ ಹೋಯಿತು. ಆದರೆ ಯಾವತ್ತೂ ನಾನು ಒಬ್ಬ ಸಮಾಜವಾದಿಯಾಗಿದ್ದುಕೊಂಡೇ, ಅದರ ಬಗ್ಗೆ ನನ್ನ ಅನುಮಾನಗಳನ್ನು ಇಟ್ಟುಕೊಂಡಿದೀನಿ. ಅದನ್ನು ನೀವೇ ಹೇಳಿದಿರಿ ಅಂತ ಕಾಣುತ್ತೆ. ನಾನು ಈ ಅನುಮಾನಗಳನ್ನು ಇಟ್ಟುಕೊಂಡಿರೋದು ಸಮಾಜವಾದವನ್ನು ಇನ್ನಷ್ಟು ಆಳವಾಗಿಸಲಿಕ್ಕೆ ಹೊರತು ಅದನ್ನು ವಿರೋಧಿಸುವ ನೆಲೆಯಿಂದಲ್ಲ. ನನಗೆ ನಿಜವಾಗಿ ಏನನ್ನಿಸಿದೆ ಅಂತ ಹೇಳ್ತೀನಿ. ಮಿಲ್—ಜಾನ್ ಸ್ಟೂವರ್ಟ್ ಮಿಲ್, ಇಂಗ್ಲೆಂಡ್‌ನಲ್ಲಿ ಅವನ ಕಾಲದಲ್ಲಿ ಬಹಳ ಲಿಬರಲ್ ಆಗಿದ್ದೋನು. ಈ ಲಿಬರಲ್‌ಗಳು, ಭೂತ ಕಾಲದ್ದು ಮಧ್ಯಯುಗದ್ದು ಅಂತ ಕಂಡದನ್ನೆಲ್ಲ ಹೀನವಾದದ್ದು ಎಂದು ಬಹಳ ಸುಲಭವಾಗಿ ನಂಬಿ ಬಿಡುವ ಸಾಧ್ಯತೆ ಇದೆ. ಅದಕ್ಕೇ ಮಿಲ್ ತನ್ನ ಹತ್ತಿರದ ಶಿಷ್ಯರಿಗೆ ಹೇಳೋನಂತೆ, "ನೀವು ಸ್ವಲ್ಪ ಕೋಲ್‌ರಿಜ್ ಓದಬೇಕೂ" ಅಂತ. ಕೋಲ್‌ರಿಜ್ ಒಬ್ಬ ಕನ್ಸರ್ವೆಟೀವ್; ಬಹಳ ಆಳವಾದ ಧಾರ್ಮಿಕ ಮನುಷ್ಯ. ತುಂಬಾ ಸೂಕ್ಷ್ಮಜ್ಞ; ತೀಕ್ಷ್ಣ ಬುದ್ಧಿಯುಳ್ಳವನು. ಹಾಗಾಗಿ; ಸಾಮಾನ್ಯವಾಗಿ ಈ ಲಿಬರಲ್‌ಗಳು, ಪ್ರಗತಿಶೀಲರು, ಎಡಪಂಥೀಯರು ಕಾಣದೆ ಹೋಗುವ ಅನೇಕ ಸತ್ಯಗಳು ಅವನಿಗೆ ಗೊತ್ತಿತ್ತು. ವರ್ಡ್ಸ್‌ವರ್ತ್ ಕೂಡಾ ಹಾಗೆಯೇ ಒಬ್ಬ ಸೂಕ್ಷ್ಮಜ್ಞ. ಜೀವನದಲ್ಲಿ ಇರತಕ್ಕಂತಹ evil ಬಗ್ಗೆ, ಸಾವಿನ ಬಗ್ಗೆ ಇವರು ಯೋಚಿಸಬಲ್ಲವರು. ಯಾರೇ ಆಗಲಿ ಸಾವಿನ ಮುನ್ಸೂಚನೆಗಳನ್ನು ಕಾಣಲೇ ಬೇಕಾಗುತ್ತದೆ; ಸಾವಿಗೆ ಸಿದ್ಧರಾಗಲೇ ಬೇಕಾಗುತ್ತದೆ. ನಮ್ಮ ಎಡಪಂಥೀಯತೆ ಇತ್ಯಾದಿ, ಇದನ್ನೆಲ್ಲ ಗಮನಿಸದೆ ಹೋದರೆ, ಅಂದರೆ ಸಮಾಜವಾದಿಯಾದ ಒಬ್ಬ, ಅವನು ದ್ರಷ್ಟಾರನೂ ಆಗದೆ, ಈ ಸಾರ್ವಜನಿಕ ಸತ್ಯಗಳನ್ನು ಅವನು ಮರೆತರೆ, ಆಗ ಅವನ ಸಮಾಜವಾದ ತೆಳುವಾಗ್ತಾ ಹೋಗುತ್ತೆ. ಸುಲಭವಾದ

ಒಂದು progressivism ಇದೆ. ಯಾರಿಗೂ ಅದರಿಂದ ಪ್ರಯೋಜನವಿಲ್ಲ. ಮತ್ತು ಇಂತಹ ಸರಳ ಯೋಚನೆಗಳ ಜನ ಅಧಿಕಾರಕ್ಕೆ ಬಂದರೆ ಬಹಳ ಹಾನಿ ಆಗುತ್ತೆ. ಸ್ಟಾಲಿನ್ ಎಂತಹ ತಪ್ಪುಗಳನ್ನು ಮಾಡಿದ ನೋಡಿ; Ethical problems ಬಗ್ಗೆ ಸಾಕಷ್ಟು ಯೋಚನೆ ಮಾಡದೆ ಹೋದದ್ದರಿಂದ ಆದ ತಪ್ಪುಗಳು ಅವು. ಅದಕ್ಕೇ ಸೋಷಿಯಲಿಸ್ಟ್ ದೇಶಗಳಲ್ಲಿ ಇವತ್ತು Ethical problems ಬಂದ ಕೂಡ್ಲೇನೆ ಅವರು ಸಮಾಜವಾದ ಬಿಟ್ಟು Existentialism, church ಮುಂತಾದ ಬೇರೆ ಬೇರೆ ದಿಕ್ಕುಗಳಲ್ಲಿ ಅದನ್ನು ಹುಡುಕೋಕೆ ಶುರುಮಾಡಿದರು. ನಾನು ಹಂಗೇರಿಯಲ್ಲಿದ್ದಾಗ ಒಬ್ಬನನ್ನು ನೋಡ್ದೆ. ಅವನು ಅಲ್ಲಿ ವಿದ್ಯುಚ್ಛಕ್ತಿ ಇಲಾಖೇಲಿ ಕಾರ್ಮಿಕನೋ ಏನೋ ಆಗಿದ್ದ. ಅವನನ್ನು ಒಂದು ಬಾರ್‌ನಲ್ಲಿ ಸಂಧಿಸಿದೆ. "ಈಗವನು ಓದ್ತಾ ಇದೀಯ" ಅಂತ ನಾನು ಕೇಳಿದಕ್ಕೆ ಅವನು, "ಶ್ವೇತಾಶ್ವತರೋಪನಿಷತ್ತು ಓದ್ತಾ ಇದೀನಿ; ಬಹಳ ದೊಡ್ಡ ಪುಸ್ತಕ" ಅಂದ. ಅವನಿಗೆ ಯಾವ ಸಮಾಜವಾದೀ ಪುಸ್ತಕಕ್ಕಿಂತಲೂ ಅದರಲ್ಲಿ ಹೆಚ್ಚು ಆಸಕ್ತಿ ಇರೋ ಹಾಗೆ ಕಂಡಿತು. ನನಗೆ ಸಮಾಜವಾದದ ಬಗ್ಗೆ ಇರುವ ಅನುಮಾನಗಳಿಗೆ ಕಾರಣ, ಸಮಾಜವಾದ ಈಗ ಇರೋ ಹಾಗೆ ಈ ಸಾರ್ವಕಾಲಿಕ ವಾದದನ್ನು ಕಾಣದೇ ಹೋದದ್ದರಿಂದ, ಎದುರಿಸದೇ ಹೋದದ್ದರಿಂದ; ಮತ್ತು ಅದರ ಅರಿವು ನನಗೆ ಆಗಿರೋದರಿಂದ. ಆ ಇನ್ನೊಂದರ ಅರಿವನ್ನು ನಾನು ಸಮಾಜವಾದಿಯಾಗಿದ್ದುಕೊಂಡೇ ಪಡೆಯುವುದಕ್ಕೆ ಇಷ್ಟಪಡುತ್ತೇನೆ; ಸಮಾಜ ವಾದ ಬಿಟ್ಟು ಅಲ್ಲ. ಯಾಕೆಂದರೆ ಮಾರ್ಕ್ಸ್ ಹೇಳುವ ಬಹಳ ಮುಖ್ಯವಾದ ಒಂದು ಮಾತಿದೆ,—"ನೀನು ನಿನ್ನ ಮನೋಲೋಕದಲ್ಲಿ ಬಯಸುವ ಬದಲಾವಣೆ ಗಳನ್ನೆಲ್ಲ ತರೋದಕ್ಕೆ ಆರ್ಥಿಕ ಲೋಕದಲ್ಲಿಯೂ ಬದಲಾವಣೆಗಳನ್ನು ಮಾಡು ವುದರ ಮುಖಾಂತರ ಪ್ರಯತ್ನಿಸದೇ ಹೋದರೆ, ಅವು ಭ್ರಮೆಗಳಾಗಿ ಉಳಿಯು ತ್ತವೆ". —ಅದನ್ನು ನಾನು ಸಂಪೂರ್ಣ ಒಪ್ಪಿಕೋತೇನೆ; ಅದು ಸದಾ ಸತ್ಯ ವಾಗಿ ಉಳಿಯುತ್ತದೆ. ಭ್ರಮಾಲೋಕದಲ್ಲಿ ನಾವು ಬಯಸುವ ಎಲ್ಲ ಬದಲಾವಣೆ ಗಳಿಗೂ, ನಿಜದ ಈ ಆರ್ಥಿಕ ಲೋಕದಲ್ಲಿ ಬದಲಾವಣೆಗಳು ಆಗಲೇಬೇಕಾಗು ತ್ತದೆ. ಕೋಡು ಹಿಡಿದು ನೀವು ಒಂದು ಗೂಳಿಯನ್ನು ಕೆಡವಬೇಕೂ ಅಂತಿದ್ದರೆ ಆ ಕೋಡು ಯಾವುದು ಅಂದರೆ ಆರ್ಥಿಕ ಲೋಕದ ಬದಲಾವಣೆಗಳು. ಇದರಲ್ಲಿ ನನಗೆ ಯಾವ ಸಂಶಯವೂ ಇಲ್ಲ; ಅಷ್ಟರಮಟ್ಟಿಗೆ ನಾನು ಸಮಾಜವಾದಿ. ಆದರೆ ಈ ಲೋಕದಲ್ಲಿ ನಾವು ಮಾಡುವ ಜೀವನಕ್ಕೆ ಬೇರೆ ಆಯಾಮಗಳು ಇದಾವಲ್ಲ; ಅದನ್ನು ಸಮಾಜವಾದ ಒಳಗೊಳ್ಳದೇ ಹೋದರೆ ಸಮಾಜವಾದ ತೆಳುವಾಗುತ್ತಾ ಹೋಗುತ್ತೆ. ಮಾರ್ಕ್ಸಿಸಂ ಬರಿ ಎಕನಾಮಿಸಂ ಆಗಿ ಡಿಜನರೇಟ್ ಆದರೆ, ನಿಜಕ್ಕೂ it becomes terrible thing, ಅದರ spiritual content ತೆಗೆದು ಹಾಕಿದರೆ, ಮಾರ್ಕ್ಸ್‌ವಾದ, ಅಮೆರಿಕದ ವ್ಯವಸ್ಥೆಗೆ,

ಅಮೆರಿಕದ ಐಡಿಯಾಲಜಿಗೆ ಒಂದು ಪರ್ಯಾಯ ಅಲ್ಲವೇ ಅಲ್ಲ. ಒಂದು ಸಮುದಾಯದ, ಕಮ್ಯೂನಿಟಿಯ ಭಾವನೆ ಮತ ಧರ್ಮಗಳಿಗೆ ಹೇಗೋ, ಹಾಗೆ ಮಾರ್ಕ್ಸಿಸಂಗೂ ಬಹಳ ಮೂಲಭೂತವಾದದ್ದು. ಭೌದ್ಧ ಧರ್ಮದಲ್ಲಿ ಅದಿದೆ: ಕ್ರಿಷ್ಚಿಯಾನಿಟಿಯಲ್ಲಿದೆ. ಮಾರ್ಕ್ಸ್‌ನ ಕನಸಿನಲ್ಲಿಯೂ ಅದಿದೆ. ಆದ್ದರಿಂದ ನಾನು ಆಗ ಹೇಳಿದೆನಲ್ಲ, ಆ ಇನ್ನೊಂದರ ಅರಿವನ್ನು ಒಳಗೊಳ್ಳುವ ನನ್ನ ಪ್ರಯತ್ನದ ದಿಕ್ಕು ನೀವು ನೋಡಿದರೆ, ನಿಮಗನ್ನಿಸಿದ್ದು ಅಷ್ಟು ಸರಿಯಲ್ಲ ಅಂತ ಅನ್ನಿಸುತ್ತೆ.

ಜಿ. ಆರ್. : ನೀವು ಪೂರ್ವ ಯುರೋಪಿನ ದೇಶಗಳಿಗೆ ಹೋಗಿ ಬಂದರಲ್ಲ; ಅಲ್ಲಿ ನಿಮಗೆ ಬಹಳ strong ಆಗಿ ಅನ್ನಿಸಿದ್ದು ಏನು ?

ಯು. ಆರ್. ಎ. : ನನಗೆ ಏನನ್ನಿಸಿತು ಅಂದರೆ ಕೈಗಾರಿಕಾ ಕ್ರಾಂತಿಯಲ್ಲಿ ಬಹಳ ಮುಂದುವರಿದ ಯುರೋಪ್‌ನ ದೇಶಗಳಿಗಿಂತ ತುಂಬ ಬಡತನ ಇರುವ ನಮ್ಮಂತಹ ದೇಶಗಳೇ ಹೆಚ್ಚು ಸಮಾಜವಾದಿಯಾಗೋದು ಸಾಧ್ಯ ಅಂತ. ನಾನು ಈ ಮಾತು ಹೇಳಿದಾಗಲೆಲ್ಲ ಜನ ನಕ್ಕಿದ್ದಾರೆ. ಕೈಗಾರಿಕೆಗಳಲ್ಲಿ ಮುಂದುವರಿದ ಹಂಗೆರಿಗಿಂತ ನಮ್ಮ ಕೊಪ್ಪಲುನಲ್ಲಿಯೇ ಸಮಾಜವಾದ ಹೆಚ್ಚು ಆಳವಾದ ಬೇರು ಊರಬಹುದು. ಇಲ್ಲಿ ಒಬ್ಬರು ಇನ್ನೊಬ್ಬರಿಗಾಗೋದು. ಎಲ್ಲರೂ ಒಂದೇ ತರಹದ ಜೀವನವನ್ನು ಹಂಚಿಕೊಂಡಿರೋದು ಕಾಣಬಹುದು. ನಿಜವಾಗಿಯೂ ಬಡವನಾದವನು ಸಮಾಜವಾದವನ್ನು ಬೇಗ ಒಪ್ಪಿಕೋತಾನೆ. ಆದರೆ ಹಂಗೆರಿಯಲ್ಲಿ ಹಾಗಿಲ್ಲ. ಅಲ್ಲಿ ವ್ಯಕ್ತಿವಾದ ಬೆಳೆದಿದೆ. ಅದಕ್ಕೆ ಕಾರಣ ಇದೆ. Matrial prosperity ಜಾಸ್ತಿ ಆಗ್ತಾ ಹೋದ ಹಾಗೆ, ಅದಕ್ಕೆ ಅಗತ್ಯವಾದ ಭಾವನಾ ಪ್ರಪಂಚ ಇದೆಯಲ್ಲ, ಅಲ್ಲಿ ಆಗುವ ಬದಲಾವಣೆಯಲ್ಲಿ ವ್ಯಕ್ತಿವಾದ ಬೆಳೆಯುತ್ತ ಹೋಗುತ್ತೆ. ಅದು ನನಗೆ ನಿಜವಾಗಿಯೂ ಅನ್ನಿಸಿದ್ದು. ಇಂಡಿಯಾ ಒಂದು ಪಕ್ಷ ಸಮಾಜವಾದಿ ರಾಷ್ಟ್ರ ಆದರೂ ಆಗಬಹುದು ; ಆದರೆ ಯುರೋಪು ಆಗೋದು ಕಷ್ಟ ಅನ್ನಿಸಿತು. And this is the very opposite of what the Marxists believe—ಅಂದರೆ ನಮ್ಮಲ್ಲಿ ಸಮಾಜವಾದ ಬರಬೇಕಾದರೆ ಇಲ್ಲಿಯೂ ಪಾಳೆಯಗಾರಿ ಸಂಪೂರ್ಣವಾಗಿ ನಾಶವಾಗಿ, ಕೈಗಾರಿಕಾ ಕ್ರಾಂತಿ ಆಗಿ, ಬಂಡವಾಳಷಾಹಿ ಬೆಳೆದು, ಅನಂತರ ಒಂದು ಸಮಾಜವಾದಿ ಕ್ರಾಂತಿ ಆಗುತ್ತೇ ಅಂತ.

ಜಿ. ಆರ್. : ಎಲ್ಲೋ ಕೆಲವರು ಹಾಗೆ ಯೋಚಿಸಬಹುದು ಅಷ್ಟೆ.

ಯು. ಆರ್. ಎ. : ಹೌದು. ಮಾರ್ಕ್ಸ್ ತನ್ನ ಹರೆಯದಲ್ಲಿ ಬರೆದ ಪುಸ್ತಕಗಳಲ್ಲಿ, ಅವನಿಗೆ ಬಹಳ ದೊಡ್ಡ spiritual dimension ಇದ್ದದ್ದು ಗೊತ್ತಾ

ಗುತ್ತೆ. ರೇಮಂಡ್ ವಿಲಿಯಮ್ಸ್‌ನ Marxism and Literature ಪುಸ್ತಕದಲ್ಲಿ ಅವನು ಇದನ್ನು ಎತ್ತಿ ಹೇಳ್ತಾನೆ. ಬಹಳ ಒಳ್ಳೆಯ ಪುಸ್ತಕ ಅದು. ಆದರೆ ಇಲ್ಲಿ ನಾವು ಒಂದು ವಿಷಯ ಮರೀಬಾರದು; ಹಾಗೆ ಯೋಚನೆ ಮಾಡುವ ಮಾರ್ಕ್ಸ್‌ವಾದಿಗಳಿದಾರಲ್ಲ ಅವರು ಮಾರ್ಕ್ಸ್‌ವಾದವನ್ನು ಸದ್ಯದ ಬಿಡುಗಡೆಯ ಅಸ್ತ್ರವನ್ನಾಗಿ ರೂಪಿಸುವುದರಲ್ಲಿ ಸೋತು ಬಿಡುತ್ತಾರೆ. ಮಾರ್ಕ್ಸ್‌ವಾದವನ್ನು ಸಮಾಜದ ಸದ್ಯದ ಬಿಡುಗಡೆಗಾಗಿ ಸದ್ಯದ ಅಸ್ತ್ರವನ್ನಾಗಿಯೂ ಉಪಯೋಗಿಸಬೇಕು. ಎಷ್ಟೋ ಸಲ ಮಾರ್ಕ್ಸ್‌ವಾದವನ್ನು ಒರಟು ಒರಟಾಗಿ ಅರ್ಥಮಾಡಿಕೊಂಡವರೇ ಅದನ್ನು ಒಳ್ಳೆಯ ಅಸ್ತ್ರವನ್ನಾಗಿ ರೂಪಿಸುವ ಶಕ್ತಿ ಉಳ್ಳವರು. ಮಾರ್ಕ್ಸ್‌ವಾದವನ್ನು ಸದ್ಯದ ಅಗತ್ಯಗಳಿಗೆ ಒಂದು ಒರಟಾದ ಆಯುಧವನ್ನಾಗಿಯೂ, ನಿತ್ಯದ ಸೂಕ್ಷ್ಮಗಳನ್ನು ಕಾಣುವುದಕ್ಕೆ—ಅದಕ್ಕೂ ಮಾರ್ಕ್ಸ್‌ವಾದ ಬೇಕು—ಒಂದು ಸೂಕ್ಷ್ಮವಾದ ಆಯುಧವನ್ನಾಗಿಯೂ ಮಾಡಿಕೋಬೇಕು. ಯಾಕೆ ಅಂದ್ರೆ ಈ ಸಾರ್ವಕಾಲಿಕವಾದ ಸತ್ಯಗಳಿರುವ ಹಾಗೆಯೇ, ಪ್ರತಿನಿತ್ಯದ ಕೊಲೆ, ಸುಲಿಗೆ, ಶೋಷಣೆ ಇವೆಲ್ಲ ಇರುತ್ತವಲ್ಲ—ಇದನ್ನು ಎದುರಿಸುವುದಕ್ಕೆ ಮಾರ್ಕ್ಸ್‌ವಾದವೇ ಬೇಕು. ಸದ್ಯದ್ದು ಮತ್ತು ಸಾರ್ವಕಾಲಿಕವಾದದ್ದು ಎರಡನ್ನೂ ಅರ್ಥ ಮಾಡಿಕೊಳ್ಳುವುದಕ್ಕೆ, ಬದಲಾಯಿಸುವುದಕ್ಕೆ ಅದನ್ನು ಬಳಸಬೇಕು ಅಂದರೆ ಅದಕ್ಕೆ ನಿಜಕ್ಕೂ ದೊಡ್ಡ ಮನಸ್ಸೇ ಬೇಕು.

ಜಿ. ಆರ್. : ಮಾರ್ಕ್ವೆಸ್ ಬಗ್ಗೆ ಕನ್ನಡದಲ್ಲಿ ಮೊದಲು ಪ್ರಸ್ತಾಪಿಸಿದವರು ನೀವು. ತುರ್ತು ಪರಿಸ್ಥಿತಿಯ ಮೊದಲ ದಿನಗಳಲ್ಲೇ ಸಂಯುಕ್ತ ಕರ್ನಾಟಕದಲ್ಲಿ ನೀವು ಬರೆದ ಒಂದು ಲೇಖನದಲ್ಲಿ ನೀವು ಆತನ ಕಾದಂಬರಿ "One hundred years of solitude" ಬಗ್ಗೆ ಹೇಳುತ್ತ, ಇಂಡಿಯಾದ ಲೇಖಕರೂ ಇನ್ನು ಅವನ ಹಾಗೆಯೇ ರೂಪಕಗಳಲ್ಲಿ, ವಕ್ರೋಕ್ತಿಯಲ್ಲಿ ಹೇಳಬೇಕಾದ್ದನ್ನು ಅಡಗಿಸಿಟ್ಟುಕೊಂಡು ಬರೆಯಬೇಕೇನೋ ಅಂತ ಬರೆದಿದ್ದಿರಿ. ಈಗ ಮಾರ್ಕ್ವೆಸ್‌ಗೆ ನೋಬೆಲ್ ಬಹುಮಾನ ಬಂದಿದೆ. ನಮ್ಮ ಕೆಲವು ವಿಮರ್ಶಕರು ನಮಗೂ ಮಾರ್ಕ್ವೆಸ್‌ಗೆ ಇರುವ ಹಾಗೆಯೇ ಬಡತನ, ಅಸಮಾನತೆ, ಪಸಾಹತುಷಾಹಿ, ಪುರಾಣಗಳು, ಮೂಢನಂಬಿಕೆಗಳು ಇತ್ಯಾದಿಗಳ ಹಿನ್ನೆಲೆಯಿದ್ದರೂ ನಮ್ಮಲ್ಲಿ ಯಾಕೆ ಒಬ್ಬ ಮಾರ್ಕ್ವೆಸ್ ಇಲ್ಲ ಅಥವಾ ಒಬ್ಬ ಅಚೇಬೆ ಇಲ್ಲ ಎಂದು ಪ್ರಶ್ನಿಸಿದರು. ಸ್ವತಃ ಒಬ್ಬ ಲೇಖಕನಾಗಿ ನಿಮಗೆ ಇಂತಹ ಮಾತುಗಳಿಂದ ಕಿರಿಕಿರಿ ಅನ್ನಿಸುತ್ತಾ ?

ಯು. ಆರ್. ಎ. : ಹೌದು... ... ...

ಜಿ. ಆರ್. : ನಿಮಗೆ ಅವನ ಹಾಗೆ ಬರೆಯಬೇಕು ಅಂತ ಈಗಲೂ ಅನ್ನಿಸುತ್ತಾ ?

ಯು. ಆರ್. ಎ. : ಇಲ್ಲ. ಯಾಕೆ ಅಂತ ಹೇಳ್ತೀನಿ, ನಮ್ಮಲ್ಲಿ ಭಾಗವತ ಇದೆಯಲ್ಲ; ಭಾಗವತಕ್ಕಿಂತ ಹಿರಿದಾದ ಪುರಾಣಗಳನ್ನು ಸೃಷ್ಟಿಸುವಂತಹ ಗ್ರಂಥ ಇನ್ನೊಂದಿಲ್ಲ. ಆ ದೃಷ್ಟಿಯಲ್ಲಿ ಅದು ರಾಮಾಯಣ ಭಾರತಗಳಿಗಿಂತ ಒಂದು ತೂಕ ಜಾಸ್ತೀನೇ. It is really the ultimate in myth-making. ಆದರೆ ನನಗೆ ಅದು ಜಗತ್ತಿನ ಶ್ರೇಷ್ಠ ಗ್ರಂಥಗಳಲ್ಲಿ ಒಂದು ಅಂತ ಅನ್ನಿಸಿಲ್ಲ. ನಾನು ಬಹಳ ಇಷ್ಟಪಟ್ಟಿದೀನಿ ಅದನ್ನ ; ಆದರೆ" The Fabulous (ಫ್ಯಾಬುಲಸ್) "ನ ಅಂಶಗಳಿಗೋಸ್ಕರ. ಆದರೆ ಭಾರತ ಓದಿದಾಗಲೆಲ್ಲ ನನಗೆ great ಅಂತ ಅನ್ನಿಸಿದೆ. ಭಾರತದಲ್ಲಿ ಅದ್ಭುತ ಮತ್ತು ವಾಸ್ತವ ಹದವಾದ ರೀತಿಯಲ್ಲಿ ಒಂದು ಇನ್ನೊಂದನ್ನು ಪೋಷಿಸುವಂತೆ ಕೆಲಸ ಮಾಡುತ್ತದೆ. ಭಾಗವತದ ಬಗ್ಗೆ ನನಗೆ ಹಾಗನ್ನಿಸಿಲ್ಲ ; ಈಗ ನೀವು ಮಾರ್ಕ್ವೆಸ್‌ನ ಅನುಯಾಯಿಯಾಗಿ ಇನ್ನೊಂದು ತುದಿಗೆ ಹೋಗಿ ಬರೀ ಫ್ಯಾಬುಲಸ್ ಒಂದನ್ನೇ ಸೃಷ್ಟಿ ಮಾಡಬಹುದು. ಆದರೆ ನೀವು ಹಾಗೆ ಸೃಷ್ಟಿ ಮಾಡುವ the fabulousಗೆ, ಇವತ್ತಿನ ಸುಖದುಃಖದ ಯಾತನೆಯ ತುರ್ತಿಲ್ಲದೆ ಹೋದರೆ, ಆಗ ಅದು ಮನಸ್ಸಿನ ಒಂದು ಆಟವಾಗಿ ಬಿಡುತ್ತದೆ ಮಾರ್ಕ್ವೆಸ್‌ನನ್ನು ಎರಡನೆಯ ಬಾರಿ ಓದಿದಾಗ, ನನಗೆ ಮೊದಲು ಓದಿದಷ್ಟು ಇಷ್ಟವಾಗಲಿಲ್ಲ. ಅವನಿಗೆ ಬರವಣಿಗೆ ಕೇವಲ ಆಟವಾಗಿ ಬಿಟ್ಟ ಹಾಗೆ ಕಂಡಿತು. ಆದರೆ ಟಾಲ್‌ಸ್ಟಾಯ್ ಓದಿದಾಗ ಯಾವತ್ತೂ ಹಾಗೆ ಅನ್ನಿಸುವುದಿಲ್ಲ. ಮನಸ್ಸಿನ ಎಲ್ಲ ಉಲ್ಲಾಸ ಉಳಿಸಿಕೊಂಡೂ ಅವನು ಸೀರಿಯಸ್ ಆಗಿ ಬರೀತಿದ್ದ. He could be deadly serious. ಉಲ್ಲಾಸ ಮತ್ತು seriousness ಎರಡನ್ನೂ ಉಳಿಸಿಕೊಂಡು ಬರೆಯೋದು ಹೇಗೆ ಅನ್ನುವುದು ಸಾಹಿತ್ಯದಲ್ಲೇ ಇರುವ ಪ್ರಶ್ನೆ ಅನ್ನಿ. ನಾನು ಇದನ್ನೆಲ್ಲ ನೋಟ್ಸ್ ಮಾಡಿಕೊಂಡಿದೀನಿ ; ಆ ಬಗ್ಗೆ ಬರೀಬೇಕೂ ಅಂತಿದೀನಿ : ಯಾವತ್ತಾದರೂ ಬರೀತೀನಿ. ಬರವಣಿಗೆಯ ಟ್ಯಾಲೆಂಟ್ ಇದೆಯಲ್ಲ ಅದು ಯಾವಾಗಲೂ ಒಳ್ಳೆಯದಕ್ಕೇ ದುಡಿಯುತ್ತೆ ಅನ್ನುವ ಗ್ಯಾರಂಟಿ ಏನೂ ಇಲ್ಲ; ಅದು ಯಾವುದಕ್ಕಾದರೂ ದುಡಿಯಬಹುದು. ಬರವಣಿಗೆ ಬರಿಯ ಅರ್ಥ ಹೀನವಾದ ಉಲ್ಲಾಸವೂ ಆಗಿಬಿಡಬಹುದು. ಅದನ್ನು ನೆನಪಿಟ್ಟುಕೊಂಡೇ ನಾವು ಮಾರ್ಕ್ವೆಸ್‌ನನ್ನು admire ಮಾಡಬೇಕು. ನಮ್ಮಲ್ಲಿ ಅಂತಹದ್ದೆಲ್ಲ ಆಗಿ ಹೋಗಿದೆ ; ಅದೇನೂ ಹೊಸದಲ್ಲ ; ಭಾಗವತ ಓದಿದ್ದರೆ ಮಾರ್ಕ್ವೆಸ್ ಬಗ್ಗೆ ಅಷ್ಟೆಲ್ಲ ಕುಣಿದಾಡಬೇಕಾಗಿಲ್ಲ. ಆದರೆ ಭಾಗವತಾನೇ ನಾವು ಓದಿರೋಲ್ಲ.

ಜಿ. ಆರ್. : ಆ ವಿಮರ್ಶಕರೂ ಓದಿರೋಲ್ಲ ಅಂತೀರಾ ?

ಯು. ಆರ್. ಎ. : ಆ ವಿಮರ್ಶಕರೂ ಓದಿರೋಲ್ಲ. ನಾನು ನಿಮಗೆ ಇನ್ನೊಂದು ಉದಾಹರಣೆ ಕೊಡುತ್ತೇನೆ. ನಮ್ಮ ಉಪನಿಷತ್ತುಗಳ ಕೆಲವು ಡಯಲಾಗ್ಸ್ ಓದಿದಾಗ ಇವತ್ತಿಗೂ ನಮಗೆ ಪ್ರೇರಣೆ ಕೊಡಬಲ್ಲ ಅಂಶಗಳು ಅವುಗಳಗೆ ಇವೆ ಅಂತ ಅನ್ನಿಸುತ್ತದೆ. ಆದರೆ ನಾವು ಅದನ್ನೆಲ್ಲ ಓದಿಯೇ ಇರೋದಿಲ್ಲ. ಯಾಕೆಂದರೆ ನಾವು ಇನ್ನೂ ಓದಬೇಕಾದ ಎಷ್ಟೆಷ್ಟೋ ಇಂಗ್ಲಿಷ್ ಪುಸ್ತಕಗಳು ಇರುತ್ತವಲ್ಲ. ಇವತ್ತು ನಮಗೂ ನಮ್ಮ ಪುಸ್ತಕಗಳಿಗೂ ನಡುವೆ ಯುರೋಪು ಅಡ್ಡ ಬಂದುಬಿಟ್ಟಿದೆ. ಅಲ್ಲಿಂದ ಬರೋ ಪುಸ್ತಕಗಳು. ಅವುಗಳ ಪ್ರತಿಷ್ಠೆ, ಪ್ರಚಾರ, ಸಾಮ್ರಾಜ್ಯಶಾಹಿಯ ಒತ್ತಡಗಳು, ನಮ್ಮ ಕೊಲೋನಿಯಲ್ ಪಾಸ್ಟ್–ಇವೆಲ್ಲ ಇಲ್ಲಿ ಕೆಲಸ ಮಾಡುತ್ತಾವೆ. ಯುರೋಪ್‌ನಿಂದ, ಅಮೇರಿಕ ದಿಂದ ಬರೋ ಪುಸ್ತಕಗಳಲ್ಲಿ ನೂರರಲ್ಲಿ ತೊಂಬತ್ತು ಪುಸ್ತಕ ನಾವು ಓದದೆ ಇದ್ದರೆ ನಮಗೆ ಏನೂ ನಷ್ಟವಿಲ್ಲ. ಅವುಗಳಿಂದಾಗಿ ನಾವು ನಮ್ಮ ದೇಶ ದ್ದನ್ನು, ನಮ್ಮ ದೇಶೀಯವಾದದನ್ನು ಕೇಳಿಸಿಕೊಂಡೇ ಇರುವುದಿಲ್ಲ ; ಓದಿಯೇ ಇರುವುದಿಲ್ಲ. ಮಾರ್ಕ್ಸ್‌ವಾದ ಕೂಡಾ ಸ್ವಲ್ಪ ಈ ಮನೋಭಾವಕ್ಕೆ ಸಹಾಯ ಮಾಡಿದೆ. ಯುರೋಪಿಗಿಂತ ನಾವು ಯಾವಾಗಲೂ ಹಿಂದೆ ; ಸರಿಯಾದ ದಿಕ್ಕಿನಲ್ಲಿ ಹೋಗುವುದು ಅಂದರೆ ಅವರನ್ನು ಅನುಸರಿಸಿಕೊಂಡು ಹೋಗು ವುದು ಅನ್ನುವ ಮನೋಭಾವ ; Actually it is a wrong attitude even towards Marxism. ಆದ್ದರಿಂದ ನನಗೆ ಏನ್ನನಿಸುತ್ತೆ ಅಂದರೆ, ಸಾಂಸ್ಕೃತಿಕವಾಗಿ ನಮ್ಮಲ್ಲಿ ಮೊದಲು ಆಗಬೇಕಾದ ಕೆಲಸ ಅಂದರೆ ಸಾಮ್ರಾಜ್ಯ ಷಾಹಿ ರೂಪಿಸಿದ ಈ ಮನೋಭಾವದಿಂದ ನಾವು ಬಿಡುಗಡೆ ಹೊಂದಬೇಕು.

Of course ಈ ಪ್ರವೃತ್ತಿಯನ್ನು ವಿರೋಧಿಸಲಿಕ್ಕೆ ಹೋಗಿ ನಾವು ಇನ್ನೊಂದು ರೀತಿಯ ಗೊಡ್ಡು ಆಚಾರಿಗಳಾಗಿ ಬಿಡಬಹುದು. ಅಂದರೆ ಏನನ್ನು ಹೇಳಿದರೂ ಅದೆಲ್ಲ ನಮ್ಮಲ್ಲಿತ್ತು, ನಮ್ಮಲ್ಲಿ ಪುಷ್ಪಕ ವಿಮಾನವಿತ್ತು, ಆದಿತ್ತು ಇದಿತ್ತು ಇತ್ಯಾದಿಯಾಗಿ ಶುದ್ಧ ರಿಯಾಕ್ಷನರಿ ಧೋರಣೆ ತಳೆಯೋದು. ಯುರೋಪಿನಲ್ಲಿ ಭವ್ಯವಾದದ್ದು, ಸುಂದರವಾದದ್ದು ಎಲ್ಲವನ್ನೂ ನಮ್ಮದೇ ಎನ್ನುವ ಹಾಗೆ ಸ್ವೀಕರಿಸುತ್ತ, ನಮ್ಮಲ್ಲಿಯೂ ಏನಿದೆ ಅಂತ ತಿಳಕೊಳ್ಳೋಕೆ ನಾವು ಪ್ರಯತ್ನಿಸಬೇಕು. ನಾವು ಬಾದಿಲೇರನನ್ನು ತಿಳಕೊಂಡಿರ್ತೀವಿ. ಆದರೆ ಉಳಿದವರಿಗಿಂತ ಭಿನ್ನವಾಗಿ ಯೋಚಿಸಿದ, ಭಿನ್ನವಾಗಿ ಬದುಕಿದ, ನಮ್ಮವನೇ ಆಗಿದ್ದ ನಾಗಲಿಂಗಯತಿಯ ಹೆಸರನ್ನು ಕೂಡಾ ನಾವು ಕೇಳಿರೋದಿಲ್ಲ.

ಅಥವಾ ನಾನು ಈಗ ಓದ್ತಾ ಇರುವ ಪುಸ್ತಕ, "ಅರ್ಧಕಥಾನಕ್" ಬಹಳ ಒಳ್ಳೆಯ ಪುಸ್ತಕ. ಅದು ಅಕ್ಬರನ ಕಾಲದಲ್ಲಿದ್ದ, ಬನಾರಸಿ ಅನ್ನುವ ಜೈನ ವರ್ತಕ ಕವಿಯೊಬ್ಬನ ಆತ್ಮ ಚರಿತ್ರೆ. ಅದು ಕಾವ್ಯದಲ್ಲಿದೆ; ಆದರೆ ರಿಯಲಿಸ್ಟಿಕ್ ಸ್ಟೈಲಿನಲ್ಲಿದೆ. ಅವನು ತನ್ನ ಐವತ್ತೈದನೆಯ ವಯಸ್ಸಿನಲ್ಲಿಯೇ ತೀರಿಕೊಂಡ; ಆದ್ದರಿಂದ ಅದು ಅರ್ಧ ಕಥಾನಕ. ಅದು ಇಂಡಿಯಾದ, ಮೊದಲ ಆತ್ಮಚರಿತ್ರೆಯಾಗಿರಬಹುದು. ನೋಡಿ, ನಾನು ಅದನ್ನ ಓದುವ ವರೆಗೆ, ನಮ್ಮ ದೇಶದಲ್ಲಿ ಆ ಕಾಲದಲ್ಲಿ ಇಂತಹ ಒಂದು ಪುಸ್ತಕ ರಚನೆಯಾಗಿದೆ ಅನ್ನೋದು ನನಗೆ ಗೊತ್ತೇ ಇರಲಿಲ್ಲ. ಈಗ ಅದನ್ನ ನಾನು ಓದ್ತಾ ಇದೀನಿ; ಈಗ ನನಗೆ ಗೊತ್ತಾಗಿದೆ. ಇಂಗ್ಲಿಷ್ ಪುಸ್ತಕಗಳು ಎಷ್ಟು ನಮಗೂ ನಮ್ಮ ದೇಶಕ್ಕೂ ಅಡ್ಡ ಬಂದಿವೆ ಅಂದರೆ ನನಗೆ ಒಂದೊಂದು ಸಲ ಇಂಗ್ಲಿಷ್ ಈ ದೇಶದಿಂದ ಹೋಗಿಯೇ ಬಿಟ್ಟರೆ ಒಳ್ಳೆಯದೋ ಏನೋ ಅಂತ ಅನ್ನಿಸಿಬಿಟ್ಟಿದೆ. ನನಗೆ ನಿಜಕ್ಕೂ ಒಮ್ಮೊಮ್ಮೆ ಕುತೂಹಲವಾಗುತ್ತದೆ; ನಮ್ಮಲ್ಲಿ ಒಬ್ಬ ಜುಟ್ಟಿರುವವ ಮಾರ್ಕ್ಸ್‌ವಾದಿಯಾಗಿದ್ದರೆ ಹೇಗೆ ಯೋಚಿಸುತ್ತಿದ್ದ ಅಂತ ತಿಳಕೋಬೇಕು ಅಂತ. ಆದರೆ ಜುಟ್ಟು ಕತ್ತರಿಸಿ ಇಂಗ್ಲಿಷ್ ಕಲಿತು, ಪೊಲಿಟಿಕಲ್ ಸೈನ್ಸ್‌ನಲ್ಲಿ M.A. ಮಾಡಿ, ಸೂಟುಬೂಟಿನಲ್ಲಿ ಬರುವ ಈ ರೆವಲ್ಯೂಷನರಿಗಳಿದ್ದಾರಲ್ಲ, ಅವರು ನಿಜಕ್ಕೂ ಸಮಾನವಾದವನ್ನು ಈ ದೇಶದಿಂದ ದೂರ ಮಾಡ್ತಾನೇ ಹೋಗ್ತಾರೆ (ನಗು). ಅದಕ್ಕೇ ನೋಡಿ ಸಂಪ್ರದಾಯವಾದಿಯಾಗಿದ್ದ ಗಾಂಧಿ ನಮ್ಮ ದೇಶವನ್ನ ಅರ್ಥ ಮಾಡಿಕೊಂಡಷ್ಟು, ನಮ್ಮ ನಿಜವಾದ ಸಮಸ್ಯೆಗಳಿಗೆ ಸ್ಪಂದಿಸಿದಷ್ಟು, M.N. Roy ಮಾಡಲಿಲ್ಲ. ನಿಮಗೆ ನಾನು ಸಂಪ್ರದಾಯವಾದಿಯ ಹಾಗೆ ಕಾಣಿಸಬಹುದು. ಆದರೆ ನನಗೆ ಆ risk ತೆಗೋಬೇಕು ಅಂತ ಅನ್ನಿಸಿದೆ. ಯಾಕೇಂದ್ರೆ ಇವತ್ತು ನಮಗೆ ಎರಡೇ ಆಯ್ಕೆ ಕಾಣಿಸ್ತಾ ಇದೆ. ಒಂದೋ ಹಕ್ಸರ್ ತರಹ ಆಗೋದು; ದೊಡ್ಡ ಅಧಿಕಾರದಿಂದ ನಿವೃತ್ತನಾಗಿ, ಸಮಾಜವಾದ, ಸಮಾನತೆ, rational approach ಇತ್ಯಾದಿ ಪ್ರತಿಪಾದಿಸುವುದು; ಇಂಗ್ಲಿಷ್‌ನಲ್ಲಿ. ಅದನಿಗೆ ಇಂಡಿಯಾದಲ್ಲಿ ಮೂಢನಂಬಿಕೇ ತರಹ ಕಾಣಿಸುತ್ತೆ. ಅಥವಾ ದೇವರಸ್ ತರಹ ಆಗೋದು. ನಾನು ಈ ಎರಡೂ ಆಗದೆ ಒಬ್ಬ ಆಳಾದ, ನಿಜವಾದ ಸಮಾಜವಾದಿಯಾಗೋದು ಸಾಧ್ಯವೆ ಅಂತ ಹುಡುಕುವುದಕ್ಕೆ ಹೊರಟಾಗ ನೀವು ಅದನ್ನು ಕನ್ಸರ್ವೆಟೀವ್ ಅಂತ ತಿಳೀಬಾರದು. ನಾನು ಇನ್ನೂ ಆ ಆಲೋಚನಾ ಕ್ರಮದ ತುದಿಗೆ ಬಂದಿಲ್ಲ. ಆದರೆ ಈ ಪ್ರಾಸೆಸ್ ಅರ್ಥಪೂರ್ಣ ಅಂತ ತಿಳಿದವರೆಲ್ಲ ನನ್ನ ಜೊತೆಗಿದ್ದಾರೆ ಅಂತ ನಾನು ಅಂದುಕೊಂಡಿದೀನಿ. ಯಾಕೇಂದ್ರೆ ಬ್ರಿಟಿಷರು ಬರುವುದಕ್ಕೆ ಮುಂಚೆ ಈ ದೇಶ ಜಡವಾಗಿರಲಿಲ್ಲ. ಅಲ್ಲಿಯವರೆಗೆ ಭಾರತ ತನ್ನ

ಹಿಂದಿನದ್ದೆಲ್ಲ ಶ್ರೇಷ್ಠ ಅಂತ ಯಾವತ್ತೂ ತಿಳಿಯದೆ, ಬದಲಾವಣೆ ಮಾಡಿ ಕೊಳ್ಳುತ್ತ ಹೊಸದಾದವನ್ನು ಸ್ವೀಕರಿಸುತ್ತ, ಬೆಳೆಯುತ್ತ ಬಂದಿದೆ. ಭಾರತ ಜಡವಾಗಿತ್ತು ಅಂತ ನಾವು ತಿಳಿದ ಕೂಡಲೆ ನಾವು ಭಾರತದ ಪ್ರಾಚೀನತೆಯನ್ನು ತಿರಸ್ಕರಿಸಿ ಬಿಡುತ್ತೇವೆ. ಒಂದೋ ಇಡೀ ಹಿಂದೂಧರ್ಮವನ್ನೇ ತಿರಸ್ಕರಿಸು ವುದು ಅಥವಾ ಮುಸ್ಲಿಮರ ವಿರುದ್ಧ ನಿಲ್ಲಿಸುವುದಕ್ಕೆ ಅಂತಲೇ ಅದನ್ನು ಎತ್ತಿ ಹಿಡಿಯುವುದು ಎರಡೂ ತಪ್ಪು. ಶಂಕರನಿಗೆ, ಮಧ್ವನಿಗೆ ಇದರ ಅವಶ್ಯವಿರ ಲಿಲ್ಲ. ಅವರು ತಮಗಿಂತ ಹಿಂದಿನದ್ದನ್ನು ನಿರ್ಭೀಥೆಯಾಗಿ ಪ್ರಶ್ನಿಸಿದ್ದರು; ಒಬ್ಬರು ಇನ್ನೊಬ್ಬರನ್ನು ಟೀಕಿಸುತ್ತಾ ಇದ್ದರು. ಮಧ್ವ ಶಂಕರನನ್ನು ಖಂಡಿ ಸಿದ್ದ. ಅಲ್ಲಮ ಉಳಿದ ಎಲ್ಲ ಶರಣರನ್ನು—ಬಸವ, ಅಕ್ಕ, ಸಿದ್ಧರಾಮ ಎಲ್ಲ ರನ್ನೂ—ಟೀಕಿಸಿದ್ದ. ಇವತ್ತು ಯಾವ ಮಠಾಧೀಶನಿಗೂ ಹಾಗನ್ನಿಸುವುದಿಲ್ಲ ನೋಡಿ. ಒಂದು ಧರ್ಮ ಇನ್ನೊಂದು ಯಾವುದೋ ಧರ್ಮಕ್ಕೆ ವಿರೋಧಿ ಯಾದ ಕೂಡಲೇ ಅದು ಗೊಡ್ಡಾಗಿ ಬಿಡುತ್ತದೆ. ಅದು ತನ್ನಲ್ಲೇ ತಾನು ಪ್ರಶ್ನಿಸಿ ಕೊಳ್ತಾ ಇದ್ದಾಗ ಅದು ಬೆಳೀತಾನೇ ಇರುತ್ತೆ. ಅದಕ್ಕೆ ಈ R.S.S. ನವರ revivalism ಪೆದ್ದುತನದ್ದು. ಅವರಿಗಿರೋದು ಕೇವಲ ಇನ್ನೂರು ವರ್ಷ ಗಳ ಇಂಡಿಯಾದ ಚರಿತ್ರೆ. ಸಾವಿರಾರು ವರ್ಷದ ವೈವಿಧ್ಯಮಯವಾದ ಚರಿತ್ರೆಗೆ ಅವರು ಕುರುಡುರಾಗಿದ್ದಾರೆ. ಸಾವಿರಾರು ವರ್ಷದ ಇಂಡಿಯಾದ ಚರಿತ್ರೆಗೆಲ್ಲ ನಾನು ಹಕ್ಕುದಾರ ಆಗ ಬೇಕು ಅಂತ ಆದಾಗ ನಾನು ಅತ್ಯಂತ ಆಳ ವಾದ ಮಾನವತಾವಾದಿ ಆಗಲೇ ಬೇಕಾಗುತ್ತದೆ. ಆದರೆ ನಮ್ಮ ವಾಮಪಂಥೀಯ ರಿಗೆ ಕಾಣಿಸೋದು ಕೂಡ ಇನ್ನೂರು ವರ್ಷಗಳ ಚರಿತ್ರೆ ಮಾತ್ರವೇ ಏನೋ ಅಂತಲೂ ನನಗೆ ಅನ್ನಿಸುತ್ತೆ. ಯಾಕೆ ಅಂದರೆ ಈ ಇನ್ನೂರು ವರ್ಷಗಳ ಹಿಂದಿನದ್ದನ್ನೆಲ್ಲ ಜಡ, ಗೊಡ್ಡು, ರಿಯಾಕ್ಷನರಿ ಅಂತ ಇವರೂ ಬಹಳ ಸುಲಭ ವಾಗಿ ನಂಬಿಬಿಡ್ತಾರೆ.

ಜಿ. ಆರ್. : ನೀವು ಹಿಂದೆ, ನಿಮ್ಮ ರುಜುವಾತು ಪತ್ರಿಕೆಯಲ್ಲಿ ಪೇಜಾವರ ಮಠಾ ಧೀಶರನ್ನು ಬೆಂಬಲಿಸಿ ಒಂದು ಪತ್ರ ಬರೆದಿದ್ದಿರಿ. ಆ ಬಗ್ಗೆ ಈಗ ನಿಮಗೆ ಏನನ್ನಿಸುತ್ತೆ ? Do you regret it now ?

ಯು. ಆರ್. ಎ. ; No. ಪೇಜಾವರ ಮಠಾಧೀಶರಿಗೆ ನನ್ನ ಬೆಂಬಲ ಸೂಚಿಸ ಬೇಕು ಅಂತ ನನಗನ್ನಿಸಿದ್ದಕ್ಕೆ ಅನೇಕ ಕಾರಣಗಳಿದಾವೆ. ನಾನು ಮಠಗಳು ಬಹಳ ಮುಖ್ಯವಾಗಿದ್ದ ಒಂದು ಮನೆತನದಿಂದ ಬಂದವನು. ಅವು regid ಆಗಿದ್ದಾಗ ಹೇಗಿದ್ದವು ಅನ್ನೋದು ನನಗೆ ಗೊತ್ತು; ಆದ್ದರಿಂದ ಪೇಜಾವರ

ಶ್ರೀಗಳು ಜಾತಿ ಪದ್ಧತಿಯ ವಿರುದ್ಧ ಮಾತನಾಡಿದಾಗ, ಹರಿಜನರಿಂದ ಮುಟ್ಟಿಸಿಕೊಂಡಾಗ ನನ್ನ ಮೇಲೆ ಅದು ತುಂಬಾ ಪರಿಣಾಮ ಮಾಡಿತು. ಹಾಗೇನೆ ಅವರು ಗುಜರಾತ್‌ನಲ್ಲಿ ನಡೆದ ಮೀಸಲಾತಿ ವಿರುದ್ಧ ಚಳುವಳಿ ಬಗ್ಗೆ ತಳೆದ ನಿಲುವು ಕೂಡಾ. ನನಗೆ ಅವರ ಧೋರಣೆ ತುಂಬ ಮುಖ್ಯವಾದದ್ದು ಅನ್ನಿಸಿತು. ಯಾಕೇಂದ್ರೆ ನಾನು ನನ್ನ ಅಮ್ಮನಿಗೆ ಆ ವಿಷಯಾನ ಹೇಳಬಹುದಾಗಿತ್ತು; ನೋಡು, ಜಾತಿ ಬಗ್ಗೆ ನಾನು ಹೇಳ್ತಾ ಇದ್ದದ್ದು ಸುಳ್ಳಲ್ಲ ಅಂತ ಅವಳನ್ನು ನಂಬಿಸಬಹುದಾಗಿತ್ತು. ನನ್ನ ಸೋದರಮಾವನಿಗೆ, ನನ್ನ ದೊಡ್ಡಪ್ಪಂದಿರಿಗೆ ನಾನು ಹೇಳಬಹುದಾಗಿತ್ತು; ನಾನು ಅವರನ್ನು ಬದಲಾಯಿಸಬಹುದಾಗಿತ್ತು. ಆಗ ನನಗೆ ಅನ್ನಿಸಿದ್ದು ಅಷ್ಟೇ. ಅದರ ಬಗ್ಗೆ ನನಗೆ ಏನೂ regret ಇಲ್ಲ. ನನ್ನ ಸ್ವಂತದವರನ್ನು ಅವರು ಅಷ್ಟು ಬದಲಾಯಿಸಿದರೆ ಅಷ್ಟರ ಮಟ್ಟಿಗೆ ಅದು ಬದಲಾವಣೆಯೇ. ಈಗಲೂ ನನಗೆ ಹಾಗೆ ಅನ್ನಿಸುತ್ತೆ. ಆದರೆ ಪೇಜಾವರ ಶ್ರೀಗಳು ಇನ್ನೂ ಮುಂದಕ್ಕೆ ಹೋಗಬಹುದು, evolve ಆಗಬಹುದು ಅಂತ ನಾನು ಅಂದುಕೊಂಡಿದ್ದೆ. ಯಾಕೆ ಅಂದರೆ ಉಡುಪಿಯ ಮಠಗಳು ತಮ್ಮ ಸುತ್ತಲಿನ ಸಮಾಜಕ್ಕೆ ಸ್ಪಂದಿಸಿದಾವೆ. ಉಡುಪಿಯ ಪರಂಪರೆಯಲ್ಲಿ ದಾಸರು ಇದ್ದರು; ವಾದಿರಾಜರು ಇದ್ದರು. ವಾದಿರಾಜರು ಕನ್ನಡವನ್ನು ಮೊದಲು ದೇವಸ್ಥಾನದಲ್ಲಿ ಬಿಟ್ಟುಕೊಂಡವರು. ಅವರು ತುಳುವಿನಲ್ಲಿಯೂ ಪದ್ಯರಚನೆ ಮಾಡಿದಾರೆ ಅಂತ ಕೇಳಿದೀನಿ. ತಾರತಮ್ಯವನ್ನು ಹೈಯರಾರ್ಕಿಯನ್ನು ಎತ್ತಿ ಹಿಡಿಯುವ ವ್ಯವಸ್ಥೆಯಲ್ಲಿಯೂ ಕೂಡಾ ಮಧ್ವಯತಿಗಳು ಸಮಾಜಕ್ಕೆ ಸ್ಪಂದಿಸಿದಾರೆ. ಆದರೆ ಅದೇ ಶೃಂಗೇರಿ ಮಠ ನೋಡಿ. ಮನುಷ್ಯ ದೇವರು ಒಂದೇ ಅನ್ನುವ ಕ್ರಾಂತಿಕಾರಕವಾದ ತತ್ವವನ್ನು ಶಂಕರ ಹೇಳಿದರೂ ಶೃಂಗೇರಿ ಮಠ ಮಾತ್ರ ಉದ್ದಕ್ಕೂ regid ಆಗಿಯೇ ಉಳಿದಿತ್ತು; ನಮ್ಮ ಸಂಸ್ಕೃತಿಗೆ ಹೊಸದಾದ ಏನನ್ನೂ ಅದು ಕೊಟ್ಟಿಲ್ಲ. ಆ ಹಿನ್ನೆಲೆಯಲ್ಲಿ ಪೇಜಾವರ ಶ್ರೀಗಳ ಈ ಸ್ಪಂದನದಿಂದ orthrodoxyಯಲ್ಲಿ ಬದಲಾವಣೆ ಆಗುತ್ತೇ ಅಂತ ನನಗೆ ಅನ್ನಿಸಿತ್ತು.

ಜಿ. ಆರ್. : ಆದರೆ ನೀವು ಆ ಪತ್ರ ಬರೆಯುವುದಕ್ಕೆ ಮುಂಚೆಯೇ ಪೇಜಾವರ ಶ್ರೀಗಳು R.S.S. ವಿಶ್ವ ಹಿಂದೂ ಪರಿಷತ್‌ನಂತಹ ಫ್ಯಾಸಿಸ್ಟ್ ಸಂಸ್ಥೆಗಳ ಜೊತೆ ಸಂಪರ್ಕ ಇಟ್ಟುಕೊಂಡಿದ್ದರು. ಅದನ್ನು ಅವರು ಏನೂ ಗುಟ್ಟಾಗಿ ಮಾಡಿರಲಿಲ್ಲ.

ಯು. ಆರ್. ಎ. : ನನಗೆ ತುರ್ತು ಪರಿಸ್ಥಿತಿಯಲ್ಲಿ ಏನನ್ನಿಸಿತು ಗೊತ್ತಾ? ಸಂಜಯ ಗಾಂಧಿ ಒಬ್ಬ ಫ್ಯಾಸಿಸ್ಟ್ ಅನ್ನಿಸಿತು. R.S.S. ನವರು ಬರೀ foolish

revivalists ಅನ್ನಿಸಿತು. ತುರ್ತು ಪರಿಸ್ಥಿತಿ ಇದ್ದಾಗ ನಾನು ಅವರ ಜೊತೆ ಕೆಲಸ ಮಾಡಿದ್ದೇನೆ. R.S.S. ನವರದ್ದು ಸಂಕುಚಿತವಾದ ಹಿಂದೂ ಮನಸ್ಸು; ಅವರು revivalists ಮತ್ತು ಅವರು ನಿಜವಾಗಿಯೂ ಭಾರತೀಯ ಸಂಸ್ಕೃತಿಯಲ್ಲಿ ಆಸಕ್ತರಲ್ಲ; ಇಷ್ಟು ಖಚಿತವಾಗಿ ನನಗೆ ಗೊತ್ತು. ಇನ್ನು ಹಿಂದೂ ಮುಸ್ಲಿಂ ಗಲಭೆಗಳಲ್ಲಿ ಅವರ ಕೈವಾಡ ಎಷ್ಟಿದೆ—ಇದನ್ನು ನಾವೆಲ್ಲ ಬಹಳ ವಿವಾದಾಸ್ಪದವಾಗಿ ಕೇಳಿಸಿಕೊಳ್ಳುತ್ತಿರುವುದರಿಂದ ಆ ಬಗ್ಗೆ ನಾನು ಖಚಿತವಾಗಿ ಹೇಳಲಾರೆ. ನನಗೆ ಗೊತ್ತಿಲ್ಲದ್ದರ ಬಗ್ಗೆ ಸಾರ್ವಜನಿಕವಾಗಿ ನಾನು ಆಪಾದನೆ ಮಾಡಲಾರೆ. ಪೇಜಾವರ ಶ್ರೀಗಳು evolve ಆಗ್ತಾ ಆಗ್ತಾ ಈ R.S.S. ಮುಂತಾದ್ದನ್ನೆಲ್ಲ ಮೀರ್ತಾ ಹೋಗ್ತಾರೆ ಅಂತ ನನಗೆ ಆಶೆ ಇತ್ತು. ಅದಕ್ಕೆ ನಾನು ಅವರನ್ನು ಬೆಂಬಲಿಸಿದೆ. ನನಗೆ ಅದು ತುಂಬ ಇಮೊಡಿಯಟ್ ಆದದ್ದು ಅಂತ ಅನ್ನಿಸಿತು. ನಾನು ಆಗ ಹೇಳಿದೆನಲ್ಲ. ಆದರೆ ಕ್ರಮೇಣ ಪೇಜಾವರ ಶ್ರೀಗಳು ಮಾಡುವುದೆಲ್ಲ ತನ್ನ ಮಠಮಾನ್ಯಗಳನ್ನು ಉಳಿಸಿಕೊಳ್ಳುವಷ್ಟು ಮಟ್ಟಿಗೆ ಮಾತ್ರ; ತನ್ನ ಪೀಠಗಳನ್ನು ಕಳಕೊಳ್ಳುವಷ್ಟು ಮುಂದೆ ಇವರು ಹೋಗಲಾರರು ಅಂತ ನನಗನ್ನಿಸಿತು. ಇದನ್ನು ನಾನು ಬಹಳ ನೋವಿನಲ್ಲೆ ಹೇಳ್ತಾ ಇದೇನೆ; ಇದರಿಂದ ನನಗೆ ಏನೂ ಸಂತೋಷವಿಲ್ಲ. ಯಾಕೇಂದ್ರೆ ಒಬ್ಬ ಯತಿ ಮುಂದೆ ಹೋದಷ್ಟು ಸಂತೋಷಪಟ್ಟುಕೊಳ್ಳುವವ ನಾನು. "ಆನಂದ ಮಠ"ದ ಕಾಲದಿಂದಲೂ ಸ್ವಲ್ಪ ಬೈರಾಗಿಗಳಾದವರೇ ಇಲ್ಲಿ ಏನಾದರೂ ಬದಲಾವಣೆ ಮಾಡುವ ಶಕ್ತಿ ಉಳ್ಳವರು. ಗಾಂಧಿಯೂ ಒಬ್ಬ ಬೈರಾಗಿಯೇ. ಜೆ.ಪಿ. ಬಗ್ಗೆ ಕೂಡಾ ಜನರಿಗಿದ್ದ ಆಕರ್ಷಣೆ ಮುಖ್ಯ ಕಾರಣ ಅವರ ವ್ಯಕ್ತಿತ್ವದಲ್ಲಿದ್ದ ವೈರಾಗ್ಯಪರವಾದ ಒಂದು ನಿಲುವು. ಆದರೆ ಪೇಜಾವರ ಮಠಾಧೀಶರದ್ದು ಕೇವಲ ಪರಿಮಿತ ಹಿತಾಸಕ್ತಿ. ತನ್ನ ದಾರಿಯಲ್ಲಿ ಬಹಳ ಮುಂದಕ್ಕೆ ಇವರು ಹೋಗಲಾರರು ಅಂತ ಗೊತ್ತಾದ ಮೇಲೆ ನನಗೆ ಅವರ ಬಗ್ಗೆ ಮೊದಲಿದ್ದ ಉತ್ಸಾಹ ಉಳಿಯಲಿಲ್ಲ. ಆದರೆ ನಾನು ಅವರನ್ನು ಅರ್ಥ ಮಾಡಿಕೊಳ್ಳಬಲ್ಲೆ. ಪ್ರಾಯಶಃ ಮಠಾಧೀಶರುಗಳಿಗೆ ಮಠವೇ ಒಂದು ಆಸ್ತಿ. ಆದ್ದರಿಂದ ಅವರಿಗೆ ಕೆಲವು ರೀತಿಯ ಧೈರ್ಯ ಸಾಧ್ಯ ಇಲ್ಲ. ನಮ್ಮ ಆಧ್ಯಾತ್ಮದಲ್ಲಿಯೂ ರಾಮಕೃಷ್ಣ ಪರಮಹಂಸ, ರಮಣನಂತಹವರಿಗೇ ಬಹಳ ದಿಟ್ಟವಾದ ಹೆಜ್ಜೆ ಇಟ್ಟು ಅಸಮಾನ್ಯವಾದ ಮಾತುಗಳನ್ನು ಆಡಬಲ್ಲ ಶಕ್ತಿ ಇತ್ತು. ಅದು ವಿವೇಕಾನಂದರಲ್ಲಿ ಕಾಣುವುದಿಲ್ಲ. ಅವರಿಗೆ ಆಗಲೇ ರಾಜಕೀಯ ಆಶೆಗಳಿದ್ದವು. ಆದರೆ ಪರಮಹಂಸರಿಗೆ ಅದಿರಲಿಲ್ಲ; ಅವರು ಒಬ್ಬ ಹುಚ್ಚ. ಎಲ್ಲ ತೀವ್ರವಾದ ಧಾರ್ಮಿಕ ಅನುಭವವೂ ಅದು ಮಠೀಯವಾದ ಕೂಡಲೇ ಕಳೆದುಹೋಗಿಬಿಡುತ್ತದೆ. ರಾಮಕೃಷ್ಣ ಪರಮಹಂಸ, ರಮಣ, ಕಬೀರ, ಅಕ್ಕ, ಅಲ್ಲಮ, ಯಾರೂ ಮಠೀಯ ವ್ಯವಸ್ಥೆಗೆ

ಒಳಪಟ್ಟವರಲ್ಲ. ಪೇಜಾವರ ಶ್ರೀಗಳು ಈ ಮಠೀಯ ವ್ಯವಸ್ಥೆಯಲ್ಲಿಯೇ ಇರುವವರು. ಆ ಪತ್ರ ಬರೆದಾಗಲೂ ಅದು ನನಗೆ ಗೊತ್ತಿತ್ತು. ಅದನ್ನು ಬರೆದದ್ದರ ಬಗ್ಗೆ ನನಗೆ ವ್ಯಥೆ ಏನಿಲ್ಲ. ಇನ್ನು ಲಂಕೇಶ್ ಪತ್ರಿಕೆ ನನ್ನ ಬಗ್ಗೆ ಏನು ಹೇಳುತ್ತೆ, ಬೇರೆಯವರು ಏನಂತಾರೆ ಅನ್ನುವುದರ ಬಗ್ಗೆ I have never cared.

ಜಿ.ಆರ್. : ಸರ್ ಈಗ "ಸಂಸ್ಕಾರ"ವನ್ನು ನೀವು ಪುನಃ ಬರೆಯುವುದಾದರೆ ಅದನ್ನು ಬೇರೆ ತರಹ ಬರೀತೀರಾ? ನಾನು ಕೇಳೋದು ಒಂದು ಮೂರ್ಖಪ್ರಶ್ನೆ ಇದ್ದರೂ ಇರಬಹುದು. ಆದರೆ ಯಾಕೆ ಕೇಳಿದೆ ಅಂದರೆ, ನನಗೆ ಮೊದಮೊದಲು ಅದು ಒಂದು ಸಂಪೂರ್ಣವಾದ ಕೃತಿ; ಅದಕ್ಕೆ ಇನ್ನು ಕೂಡಿಸೋದು, ಕಳೆಯೋದು ಏನೂ ಇಲ್ಲ ಅಂತ ಅನ್ನಿಸ್ತಾ ಇತ್ತು. ಆದರೆ ಈಗ ಆ ಕಾದಂಬರಿ ಸಂಪೂರ್ಣವಾದ ಕೃತಿ ಅಲ್ಲ, ಅಂತ ಅನ್ನಿಸ್ತಾ ಇದೆ. ಯಾಕೆ ಅಂದರೆ ಯಾವುದೇ ಬ್ರಾಹ್ಮಣ ಅಗ್ರಹಾರ ಶೂದ್ರ ದುಡಿಮೆ ಇಲ್ಲದೆ ಬದುಕೋದೇ ಸಾಧ್ಯ ಇಲ್ಲ. ಆದರೆ ನಿಮ್ಮ ಕಾದಂಬರಿಯಲ್ಲಿ ಅದರ ಪ್ರಸ್ತಾಪವೇ ಇಲ್ಲ. ಆ ದೃಷ್ಟಿಯಿಂದ ಅದು ಅಪೂರ್ಣವಾದ ಕೃತಿ.

ಯು.ಆರ್.ಎ. : ಈ ವಿಮರ್ಶಾ ವಿಧಾನದಿಂದ ನೋಡಿದರೆ ನನ್ನ ಎಲ್ಲ ಕೃತಿಗಳೂ ಅಪೂರ್ಣವೇ.

ಜಿ.ಆರ್ : ಇಲ್ಲ. ನನಗೆ ನೀವು ಇವತ್ತಿನ ಕನ್ನಡದ ಗದ್ಯ ಲೇಖಕರಲ್ಲೆಲ್ಲ ಅತ್ಯಂತ ಮಹತ್ವಾಕಾಂಕ್ಷಿ ಲೇಖಕರು ಅಂತ ಅನ್ನಿಸಿದೆ. ನೀವು ನಿಮ್ಮ ಬರವಣಿಗೆಯಲ್ಲಿ ಇಂದ್ರಿಯಗಳು ಗ್ರಹಿಸುವ ವಿವರಗಳು ಮತ್ತು ಚಿಂತನೆಯ ಮಟ್ಟದಲ್ಲಿ ನಡೆಯುವಂತಹದ್ದು—the sensuous ಮತ್ತು the cogitative ಎರಡನ್ನೂ ಒಟ್ಟೊಟ್ಟಿಗೆ ಭಾಷೆಯಲ್ಲಿ ಹಿಡಿದಿಡಲು ಪ್ರಯತ್ನಿಸುತ್ತೀರಿ. ಆ ದೃಷ್ಟಿಯಿಂದ ನಿಮ್ಮ ಕಾದಂಬರಿಯನ್ನು ಪೂರ್ಣಗೊಳಿಸುವುದಕ್ಕೆ ನಾನು ಹೇಳಿದ ವಿವರಗಳು ಬೇಕು. ಕಾದಂಬರಿಯ ತಾತ್ವಿಕತೆಗೂ ಅದು ಅವಶ್ಯ. Geographical proximity ಯ ದೃಷ್ಟಿಯಿಂದಲೂ ಶೂದ್ರರ ಕೇರಿಗಳು ಅಗ್ರಹಾರಗಳ ಹತ್ತಿರದಲ್ಲೇ ಇರುತ್ತಾವೆ. ಆದರೆ ನಿಮ್ಮ ಕಾದಂಬರಿಯ ಶೂದ್ರ ಪಾತ್ರಗಳೆಲ್ಲ ಬರಿಯ caricatures ಆಗಿದಾವೆ; ಮತ್ತು ಶೂದ್ರ ದುಡಿಮೆಯ ಒಂದೇ ಒಂದು ಸಣ್ಣ ವಿವರ ಮಾತ್ರ ಕಾದಂಬರಿಯಲ್ಲಿ ಸಿಗುತ್ತದೆ.

ಯು.ಆರ್.ಎ. : ಕಾದಂಬರಿಯಲ್ಲಿ ಆ ವಿವರಗಳೆಲ್ಲ ಪ್ರತ್ಯಕ್ಷವಾಗದೆ ಸೂಚ್ಯವಾಗಿ ಇರೋದು ಸಾಧ್ಯವಿಲ್ಲವಾ? Brahamin degeneration ನಲ್ಲಿಯೇ

ಅವೆಲ್ಲ ಇರುವುದು ಸಾಧ್ಯವಿಲ್ಲವಾ ? ಇದೆ ಅಂತ ನನ್ನ ಭಾವನೆ. ಆ ಕಾದಂಬರಿಯನ್ನು ಒಂದು ಭಾವಗೀತಾತ್ಮಕವಾದ ಕೃತಿ ಅಂತ ಓದಿದರೆ, ಒಂದು poem ತರಹ ಓದಿದರೆ ಆಗಲೂ ಆ ವಿವರಗಳೆಲ್ಲ ಬೇಕು ಅನ್ನಿಸುತ್ತಾ ? ನೀವು ಸರಿಯಿದ್ದರೂ ಇರಬಹುದು. ಡಿ.ಆರ್. ನಾಗರಾಜ್ ಕೂಡಾ ನನಗೆ ಇದೇ ತರಹದ ಪ್ರಶ್ನೆ ಕೇಳಿದಾರೆ, ನನಗೆ ಗೊತ್ತಿಲ್ಲ. ಕಾದಂಬರಿ ಪ್ರಕಟವಾದ ಮೇಲೆ ನಾನು ಅದನ್ನು ಓದಿಲ್ಲ. ನನಗೆ ಈಗ ಅದು ಪೂರ್ತಿ ಮರೆತುಹೋಗಿದೆ. ಬಹುಶಃ ಈಗ ಮತ್ತೆ ಓದಿದರೆ, ಒಂದು distance ನಲ್ಲಿ ನನಗೆ ಬೇರೆ ತರಹ ಅನ್ನಿಸಬಹುದು. ಆದ್ದರಿಂದ ನಿಮ್ಮ ಪ್ರಶ್ನೆಗೆ ನಾನು ಉತ್ತರ ಕೊಡಲಾರೆ. ಬೇರೆ ಯಾರಾದರೂ ಇದನ್ನು ಉತ್ತರಿಸಬೇಕು.

ಜಿ. ಆರ್. : ನಿಮ್ಮ ಭಾರತೀಪುರದ ಬಗ್ಗೆ ಬರೆಯುತ್ತ ಶಂಕರಮೊಕಾಶಿ, ಅಲ್ಲಿನ ಹತ್ತು ಹರಿಜನರಿಗೆ ಹೆಸರೇ ಇಲ್ಲ ಅಂತ ಹೇಳಿದಾರೆ. ಕಾದಂಬರಿಯ ಬಗ್ಗೆ ಅವರು ಏನನ್ನುತ್ತಾರೆ ಅನ್ನುವುದನ್ನು ಪೂರ್ತಿ quote ಮಾಡ್ತೀನಿ ; "ಅನಂತಮೂರ್ತಿಯವರ ಭಾರತೀಪುರ ಜೀವನ ನಿಷ್ಠವಾದರೂ ಇಡಿಯ ಕಥಾವಸ್ತುವಿನ ಕಠೋರತೆಯ ವಾಸ್ತವ ಚಿತ್ರಣವನ್ನು ಸಮಗ್ರೀಕರಿಸುವ challengeನ್ನು ಮುಖಾಮುಖಿಯಾಗಿ ಸ್ವೀಕರಿಸದೆ ಇಡಿಯ ಕಥೆಯನ್ನು ಜಗನ್ನಾಥನ ಅಪರಿಪಕ್ವ ಇಂಗ್ಲೆಂಡ್ ಪ್ರಣಯದ personal projection ದ ಕನಸಾಗಿ ಮಾಡುತ್ತದೆ. ಇದೇ ಕಾರಣದಿಂದ ಹತ್ತು ಹರಿಜನರಿಗೆ ಹೆಸರೇ ಇಲ್ಲ" (ಶಂಕರ ಮೊಕಾಶಿ ಪುಣೇಕರ—ಸಾಹಿತ್ಯ ಮತ್ತು ಅಭಿರುಚಿ. ಪುಟ 78) ನನಗೆ ಇದು ಒಂದು ಒಳ್ಳೆಯ ಪಾಯಿಂಟ್ ಅಂತ ಅನ್ನಿಸಿದೆ. ನೀವು ಏನಂತೀರಿ ?

ಯು. ಆರ್. ಎ. : ಕಾದಂಬರಿಯಲ್ಲಿ ಯಾರ consciousness ಮುಖಾಂತರ ನಾನು ಇಡೀ ಕಥೆಯನ್ನು ಬರೆದಿದೀನೋ ಅವನಿಗೆ ಅಂದರೆ ಜಗನ್ನಾಥನಿಗೆ, ಆ ಹೆಸರುಗಳು ಗೊತ್ತಿದ್ದಿದ್ದರೆ ಆ ಕಾದಂಬರಿಯೇ ಬೇರೆ ತರಹದ್ದಾಗಿರುತ್ತಿತ್ತು. ಹೀಗೆ ಗೊತ್ತಿಲ್ಲದೆ ಇರುವುದರ, ಗೊತ್ತಾಗುವುದು ಸಾಧ್ಯವೇ ಇಲ್ಲದಿರುವುದರ ಒಂದು ಜೀವನ ಕ್ರಮವನ್ನು ಚಿತ್ರಿಸುವುದೇ ನನ್ನ ಉದ್ದೇಶವಾಗಿತ್ತು. ಇನ್ನೂರು ವರ್ಷಗಳ ವಸಾಹತುಶಾಹಿಯಿಂದಾಗಿ ನಮಗೆ ನಮ್ಮ ನೆಲದ ಜೊತೆ, ನಮ್ಮ ವಾಸ್ತವದ ಜೊತೆ ಸಂಪರ್ಕ ಕಳೆದುಹೋಗಿದೆ ; ನಾವು ಒಂದು ಮುಕ್ಕಾದ ಜನತೆ. ನನ್ನ ಇಡೀ

ಕಾದಂಬರಿ ಇರೋದು ನಾವು ಇದನ್ನು ವಿಚಾರುವುದಕ್ಕೆ ಮಾಡುವ ಪ್ರಯತ್ನಗಳನ್ನು ವರ್ಣಿಸುವುದಕ್ಕೆ. ನನಗೆ ಮೊಕಾಶಿಯವರ ಬಗ್ಗೆ ಸಿಂಪಥಿ ಇದೆ. ಅವರೂ ಸಾಮ್ರಾಜ್ಯಷಾಯಿ ನಮ್ಮ ಜೀವನವನ್ನು ಮುಕ್ಕಾಗಿರಿಸಿದ್ದರ ಬಗ್ಗೆ ಯೋಚಿಸುತ್ತಾರೆ. ಮೊಕಾಶಿಯವರಿಗೂ ನನ್ನ ಬಗ್ಗೆ ಸಿಂಪಥಿ ಇದೆ ಅಂದುಕೊಂಡಿದ್ದೀನಿ. ಯಾಕೆಂದರೆ ಅವರಿಗೂ ಈ ಸಮಸ್ಯೆಗಳೆಲ್ಲ ಇದಾವೆ. (ನಗು).

ಆದರೆ ಮೊಕಾಶಿ, ನಮ್ಮ ಸಂಸ್ಕೃತಿಯ ಮೇಲೆ ಈ colonial imperialists ಪ್ರಭಾವಗಳನ್ನು ವಿರೋಧಿಸುವುದಕ್ಕೆ ಹೋಗಿ ಒಮ್ಮೊಮ್ಮೆ ಇನ್ನೊಂದು ಅತಿಗೆ ಹೋಗಿಬಿಡ್ತಾರೆ. ಬೇಂದ್ರೆ ಬಗ್ಗೆ ಬರೀತ ಅವರು 'ಬ್ರಿಟಿಷರು ಬರುವ ಮೊದಲು ನಮ್ಮಲ್ಲಿ ಅತ್ತೆ ಸೊಸೆಯರ ಜಗಳವೇ ಇರಲಿಲ್ಲ ; ಯಾಕೆಂದರೆ ಹುಡುಗ ಹುಡುಗಿಯರಿಗೆ ಆಗ ಬಹಳ ಚಿಕ್ಕ ಪ್ರಾಯದಲ್ಲಿಯೇ ಮದುವೆ ಮಾಡುತ್ತಿದ್ದರು' ಅಂದುಬಿಟ್ಟರು. ಡೆಕ್ಕನ್ ಹೆರಾಲ್ಡ್‌ನಲ್ಲಿ ಸೈನ್ಸ್‌ನ ರೋಲ್ ಬಗ್ಗೆ ಕಾಂಟ್ರವರ್ಸಿ ನಡೀತಿಲ್ಲ ಆಗ ನನಗೆ T. G. V. ನಿಲುವು ಕೂಡಾ ಹೀಗೆಯೇ ಅಂತ ಕಂಡಿತು. ನಮ್ಮ ದೇಶವ ಜನ ಎಲ್ಲ ಬರೀ ಮೂಢನಂಬಿಕೆಗಳ ಜನ ಎಂದು ತಿರಸ್ಕಾರದಿಂದ ನೋಡುವುದು ಎಷ್ಟು ತಪ್ಪಾಗುತ್ತೊ, ಅದಕ್ಕೆಲ್ಲ ಸಮರ್ಥನೆ ಕೊಡುತ್ತ ಸೈನ್ಸನ್ನು ವಿರೋಧಿಸುವುದೂ ಅಷ್ಟೇ ತಪ್ಪಾಗುತ್ತದೆ. T. G. V. ಗೆ M. G. R. ಒಬ್ಬ ನಿಜವಾದ ಹೀರೋನ ಹಾಗೆ ಕಾಣಿಸ್ತಾನೆ ; ಅಥವಾ N. T. R. ರಾಮನ ಅವತಾರದ ಹಾಗೆ. ಪ್ರಶ್ನೆ ಇರೋದು ನೀವು ಆ ಸಿನೆಮಗಳನ್ನು ಇಷ್ಟಪಡುತ್ತೀರಾ ? ಅಥವಾ ನಿಮ್ಮ ಸ್ವಂತದ ಮಾನಸಿಕ ಜೀವನಕ್ಕೆ ಆ ಮೂಢನಂಬಿಕೆಗಳ ಆಸರೆ ಬೇಕು ಅಂತ ಅನ್ನಿಸುತ್ತಾ ? ನಿಮಗೆ ನಿಜಕ್ಕೂ ಬೇಡವಾದದ್ದು, ಅದು ಜನರಿಗೆ ಬೇಕಾಗುತ್ತೆ ಅಂತ ಹೇಗೆ ನಿರ್ಧರಿಸಿದಿರಿ ? ಜನರಲ್ಲಿ ಅದೆಲ್ಲ ಇದೆ ಅನ್ನೋದನ್ನ ಒಪ್ಪಿಕೊಳ್ಳೋಣ ; ಅದಕ್ಕೆ ಅದರದ್ದೇ ಆದ ಕಾರಣಗಳು, ಅವಶ್ಯಕತೆಗಳು ಇವೆ ಅನ್ನೋದನ್ನೂ ಒಪ್ಪಿಕೊಳ್ಳೋಣ. ಆದರೆ ಅದನ್ನು ಗುರುತಿಸುವುದು ಬೇರೆ ; ಅದನ್ನು ಸಮರ್ಥಿಸುತ್ತ ಆಧುನಿಕ ಅನ್ನಿಸಿದ್ದನ್ನೆಲ್ಲ ವಿರೋಧಿಸುವುದು ಬೇರೆ.

ಜಿ. ಆರ್. : ನಿಮ್ಮ "search for an identity-a view point of a kannada writer" ಪ್ರಬಂಧದ ಕೊನೆಯಲ್ಲಿ ಬರಹಗಾರ

ನೊಬ್ಬ ಅದು ಅಸಾಧ್ಯವೆನ್ನುವ ಹಾಗೆ ಕಂಡರೂ, ಬರೀ ತನಗಷ್ಟೆ, ಸ್ವಾಂತ ಸುಖಾಯ ಎಂಬಂತೆ ಬರೆಯಬೇಕೋ ಏನೋ ಅನ್ನುವ ಅರ್ಥದ ಮಾತಿದೆ. ನಿಮಗೆ ಈಗಲೂ ಹಾಗನ್ನಿಸುತ್ತ ?

ಯು. ಆರ್. ಎ. : ಬಹಳ ನಿಜವಾದದ್ದನ್ನು, ಬರೀಬೇಕಾದರೆ ಲೇಖಕ ತನಗೆ ತಾನೇ ಬರಕೋಬೇಕು ಅಂತ ಈಗಲೂ ನನಗನ್ನಿಸುತ್ತೆ. ಬಸವನಿಗೆ ತನ್ನ ಸದ್ಯದ ಬಗ್ಗೆ ಅನ್ನಿಸಿದ್ದು ಕೂಡಾ ಸಾರ್ವಕಾಲಿಕ ಅಂತ ನಮಗೆ ಅನ್ನಿಸುವುದಕ್ಕೆ ಕಾರಣ, ಆತ ತನಗೆ ತಾನೇ ಮಾತಾಡಿಕೊಂಡ ಹಾಗೆ ವಚನಗಳನ್ನು ರಚಿಸಿರುವುದು. ಇಂಗ್ಲಿಷ್‌ನಲ್ಲಿ ಕೂಡಾ, ನಾವು ಮೆಚ್ಚುವ ಲೇಖಕರು ಯೇಟ್ಸ್, ಎಲಿಯಟ್, ಹಾಪಕಿನ್ಸ್, ಲಾರೆನ್ಸ್ ಎಲ್ಲರೂ ತಮಗೆ ತಾವೇ ಬರೆದುಕೊಂಡವರು ; ಒಳಗೊಳಗೇ ಪಕ್ವವಾಗುತ್ತ ಬರೆದವರು. ಎಷ್ಟೋ ಸಲ ಇವರು ಬಹಳ ಜನ ವಿರೋಧಿಯಾದ ನಿಲುವುಗಳನ್ನು ತಳೆದಿದ್ದಾರೆ ; reactionaries ಆಗಿದ್ದಾರೆ. ಆದರೆ ವೆಲ್ಸ್, ಗಾಲ್ಸ್‌ವರ್ದಿಯಂತಹದವರು ಹಾಗಲ್ಲ. ಅವರು ಪ್ರಗತಿಶೀಲರು ; ಆಶಾವಾದದಿಂದ ಬರೆದವರು. ಆದರೆ ಇವರನ್ನು ಓದಿದಾಗ ಇವರು ಯೂರೋಪಿನವರು, ನಾನು ಹಿಂದುಳಿದ ದೇಶದವನು, ನನಗಿಂತ ಅವರು ಯಾವಾಗ್ಲೂ ಮುಂದೆ ಇರ್ತಾರೆ ಅನ್ನುವುದು ನನಗೆ ಮರವೆಯಾಗುವುದಿಲ್ಲ. ಆದರೆ ಯೇಟ್ಸ್, ಎಲಿಯೆಟ್, ಲಾರೆನ್ಸ್, ಹಾಪಕಿನ್ಸ್‌ರನ್ನು ಓದಿದಾಗ ನನಗೆ ಹಾಗನ್ನಿಸುವುದಿಲ್ಲ. ಅವರು ಯೂರೋಪಿನ ನಾಗರೀಕತೆಯ ಒಳಗಿನ ರೋಗವನ್ನು ಕಂಡುಕೊಂಡು ಅದನ್ನು ವ್ಯಕ್ತಪಡಿಸಿದಾರೆ ಅಂತ ಅನಿಸುತ್ತೆ. Audience ನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಅವರು ಬರೆಯದೆ ಹೋದದ್ದರಿಂದ ಅದು ಸಾಧ್ಯವಾಗಿದೆ. ನನ್ನ ಎದುರಿಗಿರುವವರು ಬರೀ ಸತ್ಯವನ್ನಷ್ಟೆ ಬಯಸುವವರು ಅನ್ನುವ ಖಾತ್ರಿ ಇದ್ದರೆ ಆಗ ನಾನು audience ಗೋಸ್ಕರ ಬರೆಯಬಹುದು. ಅದಿಲ್ಲದೇ ಹೋದಾಗ ನಾನು ನನಗಷ್ಟೇ ಬರೆದುಕೊಳ್ಳಬೇಕು. ಆದರೆ ideally ಕೂಡಾ ಅದು ಕಷ್ಟ ; ಅದನ್ನೂ ನಾನು ಹೇಳಿದ್ದೇನೆ.

(ಸಂದರ್ಶನದ ದಿನಾಂಖ–28-2-1983)

# ಬೀಜ : ಗಿರೀಶ ಶ್ರೇಯಾಂಸನಾಗುವ ಬಗೆ

—ಕೆ. ವಿ. ನಾರಾಯಣ

ಮುಕ್ತಿಯ ಗಿರೀಶನ ಜಗಿತ ಗುರುತ್ವಬಲದ ಕಕ್ಷೆಯನ್ನು ದಾಟಿ ಹೊರಗೆ ಬೀಳುವ ಬಗೆಯದ್ದಲ್ಲ. ನೆಲದ ಕರೆಗೆ ಮರಳುವ ಬಯಕೆ ಅವನಲ್ಲಿ ಎಲ್ಲಿಯೋ, ಮಾವಿನ ಟೊಂಗೆಯೊಡನೆ ಜೀಕಾಡಿದ ನೆನಪಾಗಿ, ಮರದ ಮೇಲೆ ಕಂಡ ಭೂತವಾಗಿ ಬೀಜ ರೂಪದಲ್ಲಿ ಇದೆ. ಅವನು ಇಪ್ಪತ್ತು ವರ್ಷ ಮುಂಬಯಿಯಲ್ಲಿ ಗೂಡು ಕಟ್ಟಿ ಈಗ ಗೂಡು ಒಡೆದು ಚಿಟ್ಟೆಯಾಗಿ ಶ್ರೇಯಾಂಸನಾಗಿ ಕೃಷ್ಣಾಪುರಕ್ಕೆ ಹಿಂತಿರುಗುತ್ತಾನೆ. ಈ ಬೆಳವಣಿಗೆಯಲ್ಲಿ ಶಾಂತಿನಾಥ ದೇಸಾಯಿಯವರ ಕಾದಂಬರಿಗಳ ಸರಣಿಗೆ ಒಂದು ಹೊಸ ತಿರುವು ದೊರಕಿದಂತೆ ಆಗಿದೆ.

ಕಾದಂಬರಿ ಮೊದಲಾಗುವುದು ಶ್ರೇಯಾಂಸನ ತಂದೆಯ ಸಾವಿನ ಉಲ್ಲೇಖದಿಂದ. ಕೊನೆಯಾಗುವುದು ಕೃಷ್ಣಾಪುರದಲ್ಲಿಯೇ ಉಳಿಯುವ ಅವನ ನಿರ್ಧಾರದಿಂದ. ತಾನು ಸತ್ತರಂತೂ ಮಗಳು ಮುಂಬಯಿಯಿಂದ ಇಲ್ಲಿಗೆ ಬರಲೇಬೇಕ್ಕಾಗುವುದೆಂಬ ಮಾತು ಹಾಗೂ ನಾಯಿ 'ಸೀಸರ್'ನ ಚರ್ಯೆಗಳಿಂದ ಕೊನೆಗೆ ಖಚಿತವಾಗುವುದಿಷ್ಟು. ಶ್ರೇಯಾಂಸ ಈಗ ತನ್ನ ತಂದೆಯ ಪಾತ್ರವನ್ನು ವಹಿಸಲಿದ್ದಾನೆ. ತಂದೆಯ ಉಪಪತ್ನಿ ಅಂಬುಜಕ್ಕನೊಡನೆ ನಡೆದುಕೊಳ್ಳುವ ಅವನ ಬಗೆಯಲ್ಲಿ, ಲಾಗಾಯ್ತಿನಿಂದ ತನ್ನ ವಂಶಕ್ಕೆ ಸಲ್ಲುತ್ತಿದ್ದ ಮರ್ಯಾದೆಗಳು ಊರಿನವರ ಮೂಲಕ ತನ್ನ ತಂದೆಯ ಅನಂತರವೂ ಹಾಗೆಯೇ ಸಲ್ಲಬೇಕೆಂದು ಅವನು ನಡೆದುಕೊಳ್ಳುವ ರೀತಿ ಇತ್ಯಾದಿಗಳಲ್ಲಿ ಈ ಅಂಶ ಸ್ಪಷ್ಟವಾಗುತ್ತದೆ. ಅವನಲ್ಲಿ ಈ ಪರಿವರ್ತನೆಯು ನಿರ್ಧಾರ ಮೂಡಿದ ಸುಮಾರು ಐದಾರು ತಿಂಗಳ ಸಂಘರ್ಷವೇ ಬೀಜ ಕಾದಂಬರಿಯಲ್ಲಿ ಕಥಾ ವಿನ್ಯಾಸವನ್ನು ರೂಪಿಸಿದೆ.

ಹೀಗೆ ಮರಳುವ ಶ್ರೇಯಾಂಸ, ತನ್ನ ಸ್ಥಗಿತ ಭೂತಕಾಲದ ಮೂಲಕ ತನ್ನನ್ನು ಕಂಡುಕೊಳ್ಳುವ ಯತ್ನ ಅವನಷ್ಟಕ್ಕೆ ಮಾತ್ರ ಸೀಮಿತವಾಗುವುದಿಲ್ಲ. ಈ ಮೂಲಕ ಸಾಂಸ್ಕೃತಿಕವಾದ ಕೆಲವು ಒತ್ತಡಗಳನ್ನು ಕಾದಂಬರಿ ತನ್ನ ತೆಕ್ಕೆಗೆ ತೆಗೆದುಕೊಂಡು ಪರಿಶೀಲಿಸಲು ಅನುವಾಗುತ್ತದೆ. ಈ ಎರಡೂ ನೆಲೆಗಳಲ್ಲಿ ಪರಸ್ಪರ

ವಿರೋಧವೂ ಇರುವುದು ಗಮನಾರ್ಹ. ಶ್ರೇಯಾಂಸ ಮುಂಬಯಿಯಿಂದ ಕೃಷ್ಣಾಪುರಕ್ಕೆ ಹಿಂತಿರುಗಿದರೆ, ಸ್ವತಃ ಕೃಷ್ಣಾಪುರ ಬೆಳವಣಿಗೆಯ ದೃಷ್ಟಿಯಿಂದ ಮುಂಬಯಿಯನ್ನು ತನ್ನ ಮಾದರಿಯನ್ನಾಗಿ ತೆಗೆದುಕೊಳ್ಳುತ್ತಿದೆ. ಕೃಷಿ ಆಧಾರಿತ ಆರ್ಥಿಕ ವ್ಯವಸ್ಥೆಯೊಳಗಿಂದ ಕೈಗಾರಿಕೆಯನ್ನು ಬೆಳೆಸುವ ಯತ್ನಗಳನ್ನು ಇಲ್ಲಿ ಕಾಣುತ್ತೇವೆ. ಈ ಎರಡೂ ನೆಲೆಗಳಲ್ಲಿ ಕಾದಂಬರಿ ಚಲಿಸುವುದಾದರೂ ಅದರ ಮುಖ್ಯ ಸಾಧನೆ ಶ್ರೇಯಾಂಸನನ್ನು ಆಧರಿಸಿದೆ. ಎಂದರೆ ಅವನ ಮೂಲಕವೇ ಉಳಿದ ಆಸಕ್ತಿಗಳನ್ನು ಶೋಧಿಸುವ ಕ್ರಮವನ್ನು ಕಾದಂಬರಿ ಬಳಸಿದೆ. ಇದು ದೇಸಾಯಿಯವರ ಕಾದಂಬರಿಗಳ ಒಂದು ಸಾಮಾನ್ಯ ತಂತ್ರ. ಕೃತಿಯ ಬಂಧಕ್ಕೆ ಅವಶ್ಯವೆನಿಸಿದ ಕೇಂದ್ರಾಗಮ ಬಲವನ್ನು ಶ್ರೇಯಾಂಸನ ಮೂಲಕವೇ ಕಾದಂಬರಿ ಪಡೆಯಲು ಹವಣಿಸಿದೆ. ಒಂದು ಸಾಮಾನ್ಯ ತಂತ್ರ ಬಂಧಕ್ಕೆ ಅವಶ್ಯವೆನಿಸಿದ ಕೇಂದ್ರಾಗಮ ಬಲವನ್ನು ಶ್ರೇಯಾಂಸನ ಮೂಲಕವೇ ಕಾದಂಬರಿ ಪಡೆಯಲು ಹವಣಿಸಿದೆ.

ಬಿಡುಗಡೆ ಬಯಸಿ ಕೃಷ್ಣಾಪುರ ಬಿಟ್ಟು ಹೊರಟ ಶ್ರೇಯಾಂಸನಿಗೆ ಅವನ ತಂದೆಯ ಪ್ರತಿರೋಧ ಒಂದು ವೈರುಧ್ಯವನ್ನು ರೂಪಿಸಿರುತ್ತದೆ. ಎಲ್ಲ ವೈರುಧ್ಯಗಳಂತೆ ಇಲ್ಲಿಯೂ ಎರಡು ಮುಖಗಳ ವಿರೋಧ ಒಂದು ತೋರಿಕೆ ಮಾತ್ರ. ಒಂದೇ ಚಲನಶೀಲ ವ್ಯವಸ್ಥೆಯ ಎರಡು ಟಿಸಿಲುಗಳಾಗಿರುವ ಶ್ರೇಯಾಂಸ ಮತ್ತು ಅಪ್ಪಾಸಾಹೇಬ ಇವರು ಇಪ್ಪತ್ತು ವರ್ಷ ಮುಖ ನೋಡದೆ ಬದುಕುತ್ತಾರೆ. ತಂದೆಯ ಸಾವಿನೊಡನೆ ಈ ವೈರುಧ್ಯ ನಿರ್ಣೀತವಾಗಿ ಶ್ರೇಯಾಂಸ 'ಪೂರ್ಣ'ನಾಗುವ ಹವಣಿಕೆಯಲ್ಲಿ ತೊಡಗುತ್ತಾನೆ. ಶ್ರೇಯಾಂಸನೇ ಹೇಳುವಂತೆ ಇದು 'ಎರಡು ಲೋಕಗಳು ಮುಖಾಮುಖಿ'ಯಾಗುವ ಬಗೆ. ಅವನು ಬಿಟ್ಟು ಬಂದ ಲೋಕ ಹಾಗೂ ಕಟ್ಟಿಕೊಂಡ ಲೋಕಗಳು ತಮ್ಮ ಪಥಗಳು ಒಂದನ್ನೊಂದು ಭೇದಿಸಲಾರವೆಂದುಕೊಂಡಿದ್ದವು. ಅಥವಾ ಶ್ರೇಯಾಂಸನಲ್ಲಿ ರಸಲ್ ಚಿಂತನೆಗಳಿಂದ ಪ್ರೇರಿತ ಬುದ್ಧಿವಾದ ನಿಲುವು ಇದ್ದಿತು. ಆದರೆ ಲಿಝಿಯೊಳಗೆ ಕ್ರಿಸ್ತಕೇಂದ್ರಿತ ಜೀವನ ಶ್ರದ್ಧೆ ಇನ್ನೂ ಉಳಿದಿರುವುದು ಶ್ರೇಯಾಂಸ ಸ್ಥಗಿತ ಭೂತಕಾಲದ ಬಗ್ಗೆ ಅವಳಿನ್ನೂ ಅಪರಿಚಿತಳಿದ್ದು ಆ ಬಗ್ಗೆ ಭಯವೂ ಇದೆ. ಈ ಮೂಲಕ ಕಾದಂಬರಿ ನಾಯಕನು ಕಟ್ಟಿಕೊಂಡ ಲೋಕದ ಗಟ್ಟಿತನದ ಬಗ್ಗೆ, ಸಾಹಿತ್ಯದ ಬಗ್ಗೆ ಒಂದು ನೈತಿಕ ನಿರ್ಣಯವನ್ನು ತೆಗೆದುಕೊಳ್ಳುತ್ತಿದೆ. ಎಂದರೆ ಆ ಲೋಕದಲ್ಲಿ ತಾನು ಇದ್ದು ಅದರಲ್ಲಿ ತನ್ನ ಬೇರುಗಳು ಇಳಿಯಲಾರವೆಂಬ ತಿಳಿವು ನಾಯಕನಲ್ಲಿ ಮೂಡುವುದು. ಅಥವಾ ನಾಯಕನನ್ನು ತನ್ನೊಳಗೆ ಚಹರೆ ಮರೆಸಿ ಉಳಿಸಿಕೊಂಡು ಅರಗಿಸಿಕೊಳ್ಳಬಲ್ಲ ಸಾಮರ್ಥ್ಯ ಆ ಮುಂಬಯಿಯ ಬುದ್ಧಿಪ್ರಧಾನ, ಪರಿಸರಕ್ಕೆ ಇಲ್ಲವೆಂದೂ ಹೇಳಿದಂತಾಯಿತು. ಇಂಥ ನಿರ್ಣಯಗಳ ಮೂಲಕ ದೇಸಾಯಿಯವರು ಮನುಷ್ಯ

ನಿಗೆ ಕೊನೆಗೂ 'ಜೀನು' (ವಂಶವಾಹಿ)ಗಳೇ ಕೀಲುಕೈಗಳೆಂಬ ನಿಲುವಿಗೆ ಬಂದಂತಾಗಿದೆ.

ಒಂದು ಬಗೆಯಲ್ಲಿ ಶ್ರೇಯಾಂಸ ಕಟ್ಟಿಕೊಂಡ ಲೋಕ ಕೂಡ ಅವನನ್ನು ಬಿಟ್ಟುಕೊಡಲು ಮುಜುಗರವಿದ್ದರೂ ಸಿದ್ಧವಿದೆ. ಲಿಝಿಯನ್ನು ಕಾದಂಬರಿ ರೂಪಿಸಿಕೊಂಡಿರುವ ಬಗೆಯಲ್ಲಿಯೇ ಶ್ರೇಯಾಂಸನ ಮರಳುವಿಕೆ ಸಲೀಸಾಗಿದೆ. ಆದ್ದರಿಂದ ಈ ಎರಡೂ ಲೋಕಗಳ ಒಳಗಿನ ಸಾಮರ್ಥ್ಯಗಳೇನೇ ಇರಲಿ, ಕಾದಂಬರಿಯಲ್ಲಿ ಮಾತ್ರ ಕಟ್ಟಿಕೊಂಡ ಲೋಕ ದುರ್ಬಲವಾಗಿದೆ. ಅಸಮ ಬಲದ ಜೋಡಿಯ ಮೇಲಾಟವಿದು. ಗೆಲುವು ಪೂರ್ವನಿಶ್ಚಿತ.

ಶ್ರೇಯಾಂಸ ಗಂಡಸು ಮಾತ್ರವಲ್ಲ : ಕಾದಂಬರಿಯ ದೃಷ್ಟಿಕೋನದ ಗಂಡುತನವನ್ನು ಪ್ರತಿನಿಧಿಸುತ್ತಾನೆ. ಅವನ ಹುಡುಕಾಟ ತನ್ನೊಳಗಿನ ಹರಕೆಯನ್ನು ಪೂರೈಸುವ ಹೆಣ್ಣತನದ ಬಗ್ಗೆ ಇದೆ. ಕೃಷ್ಣಾಪುರದ ಸ್ಥಗಿತ ಭೂತಕಾಲದಿಂದ ಹಾಗೂ ವರ್ತಮಾನದಿಂದ ಅವನಿಗೆ ಎದುರಾಗುವ ಹೆಂಗಸರು ಹಲವರು. ತಾಯಿ, ಅಕ್ಕ, ಗೆಳತಿ ರೇವತಿ, ಗೆಳೆಯನ ಹೆಂಡತಿ ನಿರ್ಮಲೆ. ತಂದೆಯ ಉಪಪತ್ನಿ ಅಂಬುಜಕ್ಕ, ಸೋನೂ. ಇವರೊಡನೆ ಲಿಝಿ ಮತ್ತು ಮಗಳು ಕಲ್ಪನಾ ಇವರೆಲ್ಲರ ಮೂಲಕ ಶ್ರೇಯಾಂಸ ತನ್ನನ್ನು ಅರಿಯಲು ತೊಡಗುತ್ತಾನೆ. ಆದರೆ ಕಾದಂಬರಿಯ ವಿನ್ಯಾಸದಲ್ಲಿ ಇವರಲ್ಲಿ ಯಾರೊಡನೆಯೂ ಆತ ಸೃಜನಶೀಲ ಸಂಬಂಧ ರೂಪಿಸಿಕೊಳ್ಳಲಾರದೇ ಹೋಗುವುದು ಸ್ಪಷ್ಟವಾಗುತ್ತದೆ. ಅವರೆಲ್ಲ ಒಂದಿಲ್ಲೊಂದು ಬಗೆಯಲ್ಲಿ ತಮ್ಮ ಜೀವನದ ಲಯಗಳನ್ನು ತಾವೇ ರೂಪಿಸುವ ಸಾಮರ್ಥ್ಯವುಳ್ಳವರು. ಚಂಚಲೆ ಎನಿಸುವ ನಿರ್ಮಲೆ ಕೂಡ ಶ್ರೇಯಾಂಸನಿಗೆ ಅವನ ಅಹಂನ ಅಪೇಕ್ಷೆಗಳಿಗೆ ತಕ್ಕಂತೆ ಆಕಾರ ಪಡೆಯುವ ಹೆಂಗಸೆಂಬಂತೆ ಕಂಡರೂ ಅವನ ಅನಿಸಿಕೆಗಳ ಆಚೆಗೂ ಆಕೆಗೊಂದು ಮಣ್ಣಿನ ಲೋಕವಿದೆ. ಕಾದಂಬರಿಯ ಕೊನೆಗೆ ಒಂಟಿಯಾಗಿ ಕುಸಿದು ಕೂರುವ ಶ್ರೇಯಾಂಸನಲ್ಲಿ ಮರಳುವುದರ ಬಗ್ಗೆ ತನ್ನಲ್ಲಿ ಮೂಡಿದ್ದ ತಾಕಲಾಟ ಕೊನೆಗೊಂಡದ್ದಕ್ಕೆ ನಿರಾಳದ ಭಾವವಿದ್ದಿತಾದರೂ, ಜೊತೆಗೆ ತಾನು ಒಂಟಿಯಾಗಿಯೇ ಉಳಿದ ಆತಂಕ ಹತಾಶೆಗಳೂ ಇಲ್ಲದಿಲ್ಲ. ಈ ನೆಲದಲ್ಲಿ ಅವನು ಕಾಣುವ ನಾಳೆಗಳು ಹಾಲು ತುಂಬಿದ ತೆನೆಗಳುಳ್ಳ ಪಯಿರುಗಳಾಗಬಲ್ಲವೇ ? ಅದಿನ್ನೂ ಅವನಲ್ಲಿ ಕೊನೆಮುಟ್ಟದ ನೆಲೆ.

ಅಲ್ಲದೆ ಅಪ್ಪಾಸಾಹೇಬರ ಮಗ ಶ್ರೇಯಾಂಸ ಓಡಿಹೋದ, ಕಲ್ಯಾಣಶೆಟ್ಟಿಯವರ ಮಗ ಏನೂ ಹೇಳದೆ ಆತ್ಮಹತ್ಯೆ ಮಾಡಿಕೊಂಡ, ಅಂಬುಜಕ್ಕನ ಮಗ ರಾಮೂ ಊರು ಬಿಟ್ಟ, ದೇವೇಂದ್ರ ಕಾಕಾನ ಮಕ್ಕಳು (ನಂದೂ, ಸುನೀಲ) ಮುಂಬಯಿಯ ದಾದಾನನ್ನೇ ಮಾದರಿ ಎನ್ನುವವರು, ರೇವತಿಯ ಮಗನೂ ಓಡಿಹೋಗಿದ್ದಾನೆ, ವಸಂತ ನಿರ್ಮಲೆಯರಿಗೆ ಮಕ್ಕಳಿಲ್ಲ. ರೇವತಿ, ಕುಸುಮ ವಿಧವೆ

ಯರು, ಕಲ್ಯಾಣಶೆಟ್ಟರೂ ಒಂಟಿಯಾಗುತ್ತಾರೆ. ಈ ಎಲ್ಲ ಸಂಗತಿಗಳನ್ನೂ ಒಟ್ಟಿಗಿರಿಸಿದರೆ ಕೃಷ್ಣಾಪುರದ ಹೊರಣ ಬಯಲಾಗುತ್ತದೆ. ಗಿರೀಶನಂಥವರು ಪ್ರಾಮಿಸ್‌ಡ್ ಲ್ಯಾಂಡ್‌ಗಳತ್ತ ಜಿಗಿದವರು. ಸಪ್ತಸಾಗರದಾಚೆಗಿನ ಕೊಳಲಿನ ನಾದಕ್ಕೆ ಮರುಳಾಗಿ ಓಡಿದವರು. ಶ್ರೇಯಾಂಸ ಮರಳುವ ನೆಲ ಹೀಗಲ್ಲ. ಇಲ್ಲಿಯೂ ಸೆಳೆತವಿದೆ. ಆದರೆ ಅದರ ಬಗೆ ಬೇರೆ. ಸೆಳೆಯುವ ನೆಲ ಬಂಜರು. ಕೃಷ್ಣಾಪುರದಲ್ಲಿ ಶ್ರೇಯಾಂಸ ಭೂತ ಕುಳಿತ ಮರವನ್ನು, ಜೀಕಾಡಿದ ಮಾವಿನ ಕೊಂಬೆಯನ್ನು ಹುಡುಕುತ್ತಾ ಬಂದಿದ್ದಾನೆ. ಆದರೆ ಕೃಷ್ಣಾಪುರದಲ್ಲೂ 'ರಸೆಲ್‌ಕ್ಲಬ್ಬು' ಬಂದಿದೆ. ಆದ್ದರಿಂದ ವಾದದಲ್ಲಿ ಕಂಡ ನಾಡು ಇರಲ್ಲ. ಇಲ್ಲಿ ಶ್ರೇಯಾಂಸನ ಸೃಜನಶೀಲತೆಗೆ ಏನು ಅರ್ಥ ಬರಲಿದೆ ? ಇದಕ್ಕೆ ಉತ್ತರ ಇಲ್ಲ.

ರೇವತಿ, ಕಲ್ಪನಾ ಇಬ್ಬರೂ ಚಿತ್ರಕಾರರು. ವಯಸ್ಸು, ಅನುಭವಗಳ ವ್ಯತ್ಯಾಸದಿಂದಾಗಿ ಇಬ್ಬರಲ್ಲೂ ಚಿತ್ರಗಳ ಬಗ್ಗೆ ಇರುವ ತುಡಿತ ಬೇರೆಯ ಬಗೆಯದ್ದು. ಇವರಿಬ್ಬರೂ ಶ್ರೇಯಾಂಸ ಬಯಸುವ ಆದರೆ ಒಪ್ಪಿಕೊಳ್ಳದ ಜೀವನ ವ್ಯಾಖ್ಯಾನಗಳನ್ನು ಸೂಚಿಸುತ್ತಾರೆ. ಕಲ್ಪನಾಳಿಗೆ ಕೃಷ್ಣಾಪುರ ಒಂದು ಮಾಡೆಲ್. ಅದ್ರು ತನಗೆ ತಾನೇ ಅರ್ಥಪೂರ್ಣವಲ್ಲ. ಅವಳ ಒಳಗಿನ ಅರ್ಥವನ್ನು ತುಂಬಬಲ್ಲ ರೇಖೆಗಳನ್ನು ಮಾತ್ರ ಚಿತ್ರಗಳಿಗೆ ಒದಗಿಸಬಲ್ಲುದು, ರೇವತಿಗೆ ಬರೆಯುವ ಚಿತ್ರಗಳಲ್ಲಿ ಕೂಡ ಇದೇ ಬಗೆ ಇದ್ದರೂ ಅವಳ ಚಿತ್ರಗಳು ಅವಳು ಕಂಡುಕೊಂಡ ಅರ್ಥವನ್ನು ಪ್ರತಿನಿಧಿಸುತ್ತವೆ. ಇವರಿಬ್ಬರೂ ಪರಿಸರವನ್ನು ತಮ್ಮ ಕ್ರಿಯಾಶೀಲತೆಯ ಅಭಿವ್ಯಕ್ತಿಗೆ ಬಳಸಿಕೊಳ್ಳುವ ಕ್ರಮದಲ್ಲಿಯೇ ವ್ಯಕ್ತಿ ಹಾಗೂ ಪರಿಸರಗಳ ಸಂಬಂಧದ ಎರಡು ಪರ್ಯಾಯ ಸಾಧ್ಯತೆಗಳಿವೆ. ಇವೆರಡರ ಬಗೆಗೂ ಶ್ರೇಯಾಂಸನಿಗೆ ಮೋಹವಿದೆ. ಆದರೆ ಅವನು ಅಲ್ಲಿ ಸಲ್ಲುವುದಿಲ್ಲ. ಚಿತ್ರಕಲೆಯನ್ನು 'ಕರಿಯರ್' ಆಗಿ ತೆಗೆದುಕೊಂಡ ಕಲ್ಪನಾಳ ಮುಖ ಪ್ಯಾರಿಸ್ ಕಡೆಗಿದೆ. ಚಿತ್ರಗಳು ಹೊಯ್ದಾಟದ ಶಮನಕ್ಕೆ ಕಾರಣವಾಗುವ ರೇವತಿ ಜೀವನ ವಿಮುಖತೆಯ ಹಂತದಲ್ಲಿದ್ದಾಳೆ. ಕಾದಂಬರಿಯಲ್ಲಿ ಶ್ರೇಯಾಂಸನನ್ನು ಬಿಟ್ಟರೆ ಅಂತರಂಗವನ್ನು ಹೊರಹಾಕುವ ಪಾತ್ರಗಳೆಂದರೆ ಇವೆರಡೇ ಸರಿ ಈ ಮಾತಿಗೆ ಕೊಂಚ ವಿವರಣೆ ನಿರೂಪಕ ಪಾತ್ರಗಳ ಒಳಗನ್ನು ಹೇಳುವ ಬಗೆ ಬೇರೆ. ಪಾತ್ರಗಳಿಗೇ ಒಳಗನ್ನು ನೋಡಿಕೊಳ್ಳುವ ಅವಕಾಶ ನೀಡುವುದು ಬೇರೆ. ಈ ಅವಕಾಶ ಈ ಕಾದಂಬರಿಯಲ್ಲಿ ಶ್ರೇಯಾಂಸನಿಗೆ (ಹಾಗಾಗಿ ಅವನೇ ಕೇಂದ್ರಪ್ರಜ್ಞೆ) ಪತ್ರಗಳ ಮೂಲಕ ಈ ಕೆಲಸ ನಡೆಯುತ್ತದೆ. ಚಿತ್ರಗಳ ಮೂಲಕ ರೇವತಿ, ಕಲ್ಪನಾಳಿಗೂ ಈ ಸೌಲಭ್ಯ ದೊರಕಿದೆ. ಆದ್ದರಿಂದ ಶ್ರೇಯಾಂಸನ ಆಯ್ಕೆಯೊಡನೆ ಹೋಲಿಸಲು ಕಾದಂಬರಿ ಈ ಎರಡು ಪರ್ಯಾಯಗಳನ್ನು ನಮ್ಮೆದುರು ಇಟ್ಟಿದೆ.

# ಅಮಾಯಕತೆಯ ನಂತರ...

—ವೆಂಕಟಲಕ್ಷ್ಮಿ ಬಿ. ಎಸ್

ಇವತ್ತು ನಾನು ಆಫೀಸಿಗೆ ಬರುತ್ತಿದ್ದಾಗ ನಾನು ಕೂತಿದ್ದ ಬಸ್ಸಿನ ಪಕ್ಕದಲ್ಲೇ ನಾಯಿಯೊಂದು ರಕ್ತ ಕಾರಿಕೊಂಡು ಬಿದ್ದಿತ್ತು. ಅದು ಅಪಘಾತಕ್ಕೆ ಸಿಕ್ಕಿದ್ದನ್ನು ನಾನೂ ನೋಡಿದ್ದೆ. ವೇಗವಾಗಿ ಚಲಿಸುತ್ತಿದ್ದ ನೀಲಿ ಬಸ್ಸಿನ ಚಕ್ರ. ರಸ್ತೆ ದಾಟಲು ನಿಂತಿದ್ದ ನಾಯಿ ಒಮ್ಮೆ ಒಂದು ಹೆಜ್ಜೆ ಮುಂದಿರಿಸಿ, ಕಾಲನ್ನು ತಟಕ್ಕನೆ ಹಿಂದಕ್ಕೆ ಎಳೆದುಕೊಂಡು, ಅದೇಕೋ ಮತ್ತೆ ಮುಂದಡಿ ಇಟ್ಟಿತ್ತು. ಮಿಕ್ಕ ನಾಯಿಗಳೆಲ್ಲ ಅದೆಲ್ಲೆಲ್ಲಿಂದಲೋ ಓಡಿ ಬಂದವು. ಕೆಳಗೆ ಬಿದ್ದಿದ್ದ ನಾಯಿಯ ಬಾಲವನ್ನು ತಮ್ಮ ಕಾಲುಗಳಿಂದ ಅಲ್ಲಾಡಿಸಿ, ಅದರ ಮೈಯನ್ನು ಹೊರಳಾಡಿಸಿ, ನನಗೆ ಅರ್ಥವಾಗದ ಭಾಷೆಯಲ್ಲಿ ಮಾತನಾಡಿಕೊಳ್ಳುತ್ತ ರಸ್ತೆಯ ಅಂಚಿಗೆ ಹೋಗಿ ನಿಂತವು.

ನಾಯಿ ಸತ್ತ ಈ ಪ್ರಸಂಗ ನನ್ನ ಮನಸ್ಸನ್ನು ಎಷ್ಟು ಮೀಟಿತೆಂದರೆ ಈಚೆಗೆ ನನ್ನಲ್ಲಿ ಮನೆ ಮಾಡುತ್ತಿರುವ ಅನಿಶ್ಚಯತೆಯ, ದಿಗಿಲಿನ ಮನೋಭಾವವನ್ನು ಅದು ಮೇಲೆಬ್ಬಿಸಿ ಜೀವನವನ್ನು ಎದುರಿಸುವ ನನ್ನ ದೃಷ್ಟಿ ಅಸಂಗತಗೊಳ್ಳುತ್ತಿರುವುದನ್ನು ಮತ್ತೆ ನೆನಪಿಸತೊಡಗಿತು. ಮಧ್ಯ ವಯಸ್ಸು ದಾಟುತ್ತಿದೆ. ಮುಂದೆ ಎಷ್ಟು ವರ್ಷ ಬದುಕಬಹುದೆಂಬ ಅಂದಾಜು ಸಿಕ್ಕಿದ ಹಾಗಾಗಿದೆ. ಮುದಿ ವಯಸ್ಸನ್ನು ತಲುಪಿದಾಗ ಹಾಯಾದ ಜೀವನ ನಡೆಸಲು ಅಗತ್ಯವಾದ ಸೋಪಾನಗಳನ್ನು ನಿರ್ಮಿಸಿಕೊಳ್ಳುವ ಕಾತುರತೆ ಹೆಚ್ಚಾಗುತ್ತಿರುವ ದಿನಗಳನು ಇವು. ಜೀವನವನ್ನು ಈ ದಿಕ್ಕಿನಲ್ಲೇ ನಡೆಸಬೇಕೆಂಬ ಛಲವಿದೆ. ಆದರೆ ನನ್ನ ಲೆಕ್ಕಾಚಾರ ತಪ್ಪಿದರೆ ಎಂಬ ಕಾರಣವಿಲ್ಲದ ಭಯ. ನಾನೂ ಅನೇಕ ಬಾರಿ ಜೀವನದಲ್ಲಿ ಒಂದು ಹೆಜ್ಜೆ ಮುಂದಿಟ್ಟು ಎರಡು ಹೆಜ್ಜೆ ಹಿಂದೆ ಸರಿದಿದ್ದೇನೆ. ಮತ್ತೆ ನಡಿಗೆ, ಹುಮ್ಮಸ್ಸು, ಮಗದೊಮ್ಮೆ ಹಿಂಜರಿಕೆ, ನಿರಾಸ, ಮನಸ್ಸು ಜೀತವಾಗಿದ್ದ ಬೆಟ್ಟವನ್ನೇ ಕಡೆಯುವ ಬಯಕೆ. ಭಾವನೆಗಳು ಛಿದ್ರಗೊಂಡಂತಾಗಿ ಭವಿಷ್ಯದ ಮೇಲೆ ಯಾವ ಹಿಡಿತವೂ ಇಲ್ಲ ಎನ್ನಿಸಿದಾಗ ಮೂಲೆಯೊಂದರಲ್ಲಿ ಕುಸಿದು ಕೂಡುವಷ್ಟು ನಿರ್ವೀರ್ಯತೆ.

ಅಮಾಯಕತೆಯ ವಯಸ್ಸೊಂದಿತ್ತು. ಅಮ್ಮ ಮಾಡಿ ಹಾಕಿದ ಅಡುಗೆಯನ್ನು ಉಂಡು ಯಾಂತ್ರಿಕವಾಗಿ ಶಾಲೆಯಲ್ಲಿ ಕೂತು, ಸಣ್ಣ ಪುಟ್ಟ ಸಂಗತಿಗಳನ್ನೆಲ್ಲ ಸವಿಯುತ್ತಿದ್ದ ಕಾಲ. ವಯಸ್ಸು ಹೆಚ್ಚುತ್ತ, ಬದುಕು ವಿಶಾಲಗೊಳ್ಳುತ್ತ, ಹೊಸ ಅನುಭವಗಳು ತೆರೆದುಕೊಳ್ಳುತ್ತಿದ್ದಂತೆಯೇ ಹುಟ್ಟಿದ ದಿಗಿಲು-ಅಂಜಿಕೆಗಳು ಇವು. ಇಂಥ ದಿಗಿಲುಗಳು ಸುಖಸಂಸಾರವನ್ನು ಬಯಸುವ ಎಲ್ಲ ಹೆಂಗಸರನ್ನೂ ಕಾಡುತ್ತವೆಯೇ ?

ಬುದ್ಧಿ ತಿಳಿದ ಮೇಲೆ ಮೊಟ್ಟಮೊದಲ ಬಾರಿಗೆ ನಾನು ದಿಗಿಲು ಪಟ್ಟದು ಮದುವೆಯಾಗಬೇಕಾದಾಗ. ಇದು ಭಾವನೆಗೆ ಸಂಬಂಧಪಟ್ಟ ಮಾತಾಯಿತು. ವಿವಾಹಕ್ಕೆ ತಲೆಯೊಡ್ಡುವುದು ಉಚಿತವೇ ಅನುಚಿತವೇ ಎನ್ನುವುದು ನನ್ನ ವಯಸ್ಸಿನಲ್ಲಿ ಮದುವೆಯಾದ ಯಾವುದೇ ಹೆಂಗಸಿನ ತಲೆಯನ್ನು ಸಹಜವಾಗಿಯೇ ತಿನ್ನುವಂತಹ ಪ್ರಶ್ನೆ. ಜೀವನದಲ್ಲಿ ನಾವು ಕೈಗೊಳ್ಳುವ ಕೆಲವು ನಿರ್ಧಾರಗಳಂತೂ ಎಷ್ಟೊಂದು ಕ್ರೂಷಿಯಲ್ ಎಂದರೆ, ಅದು ನಮ್ಮ ಮುಂದೆ ಕೆಲವೊಮ್ಮೆ ಸ್ವರ್ಗವನ್ನೇ ತೆರೆದಿಡಬಹುದು. ಮತ್ತೊಮ್ಮೆ ಬದುಕಿಗೇ ಮಾರಕವಾಗಬಹುದು. ನಾವೇ ನಿರ್ಧಾರವನ್ನು ಕೈಗೊಳ್ಳಬೇಕಾದ ಘಟ್ಟ ಬಂದಾಗಲೆಲ್ಲ, ಈ ತೊಳಲಾಟ ಶತಸಿದ್ಧ.. ವಯಸ್ಸಿನ ಹಿಂದೆಅನುಭವದ ಹೊರೆಯಿರುತ್ತದೆ. ಈ ಅನುಭವಕ್ಕೆ ಪ್ರತಿಯೊಂದು ಪ್ರಸಂಗವನ್ನು ತುಲನೆ ಮಾಡುವ ತಾಕತ್ತಿರುತ್ತದೆ. ನಿರ್ಧಾರವನ್ನು ನಮ್ಮ ಮುಂದಿಟ್ಟುಕೊಂಡು ನಾವು ಅದನ್ನು ಬೇರೆ ಬೇರೆ ಬೆಳಕಿನಲ್ಲಿಟ್ಟು ನೋಡುತ್ತೇವೆ. ಅದನ್ನು ನಮ್ಮ ಆಸೆಗೆ ಆವೇಶಕ್ಕೆ ತಕ್ಕಂತೆ ತಡೆಯುವುದು ಸಾಧ್ಯವೇ ಎಂದು ಪರಿತಪಿಸುತ್ತೇವೆ. ನಾನೀಗ ಆ ಆಯಾಮದಲ್ಲಿ ಯಶಸ್ವಿಯಾಗಿ ಗಟ್ಟಿ ಹೆಜ್ಜೆಗಳನ್ನಿರಿಸಿ ವಿವಾಹದ ಮುಂದಿನ ಮಜಲಿನತ್ತ ದೃಷ್ಟಿ ಹರಿಸಿದ್ದೇನೆ. ನ್ಯಾಯವಾಗಿ ನಾನೀಗ ತುಂಬಾ ನಿರಾತಂಕವಾಗಿರಬೇಕು, ಆದರೆ ಮೈಯಿಗೆ, ಮನಸ್ಸಿಗೆ ತೀರಾ ಹಾಯಾದ ವಾತಾವರಣವಿದ್ದಾಗ್ಯೂ ನನ್ನ ಪ್ರಜ್ಞೆಯ ಯಾವುದೋ ಮೂಲೆಯಲ್ಲಿ ಅನಿಶ್ಚತೆಯ ಅಪಸ್ವರ ಗುಯ್‌ಗುಡುತ್ತಲೇ ಇರುವುದಕ್ಕೆ ಕಾರಣ ಯಾವುದು ? ಇಂದು, ಈ ಗಳಿಗೆ ನನ್ನ ಹಿಡಿತಕ್ಕೆ ಸಿಕ್ಕಿದೆ ಎಂಬ ಆತ್ಮವಿಶ್ವಾಸ ಮೊಳೆಯುತ್ತಿರುವಾಗಲೇ, ಮುಂದಿನ ದಿನಗಳು ಇದೇ ರೀತಿ ಇರಬಲ್ಲವೆ ಎಂಬ ಕಸಿವಿಸಿ ಮೂಡುವುದೇಕೆ ?

ನಾನು ಈ ಅನಿಶ್ಚಯತೆಗೆ, ನನ್ನ ಈ ಆತಂಕಗಳಿಗೆ ಕಾರಣಗಳನ್ನು ನನ್ನ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹುಡುಕುತ್ತೇನೆ. ನಾನು ನನ್ನ ಹಿರಿಯರಿಗಿಂತ ಹೆಚ್ಚು ದಿಗಿಲುಗೊಳ್ಳಲು, ಧಾವಂತಗಳನ್ನು ಎದುರಿಸಲು ಕಾರಣ ನನ್ನ ತಿಳಿವಳಿಕೆ ಎಂಬ ನಿರ್ಧಾರಕ್ಕೆ ಬಂದಿದ್ದೇನೆ.

ನಾನಿಲ್ಲಿ ತೀರಾ ಸಣ್ಣಪುಟ್ಟ ಉದಾಹರಣೆಗಳನ್ನು ಕೊಡುತ್ತೇನೆ. ನನ್ನ ಮನೆಯ ಕೆಲಸದವಳಿದ್ದಾಳೆ. ಪಕ್ಕದಲ್ಲಿನ ಗುಡಿಸಲುಗಳಲ್ಲಿ ಅನೇಕ ಹೆಂಗಸರು

ವಾಸವಾಗಿದ್ದಾರೆ. ದೂರದಲ್ಲಿ ಮನೆ ಕಟ್ಟುತ್ತಿರುವ ಹೆಣ್ಣು ಕೂಲಿಗಳಿದ್ದಾರೆ. ಗಂಡ ರಾತ್ರಿ ಬಹು ಹೊತ್ತಿನವರೆಗೂ ಮನೆಗೆ ಬರದಿದ್ದಾಗ ಅಥವಾ ಆಡಲು ಹೋದ ಮಗು ಸಂಜೆಯಾದರೂ ಹಿಂತಿರುಗದಿದ್ದಾಗ ಅವರು ನನ್ನಂತೆ ಚಡಪಡಿಸು ವುದನ್ನು ನಾನು ನೋಡಿಲ್ಲ. ನನಗೆ ಗಂಡ ಮನೆಗೆ ಬರುವುದು ಸ್ವಲ್ಪ ತಡವಾ ದರೂ ಪೇಪರಿನಲ್ಲಿ ಓದಿದ ಅಪಘಾತಗಳು ಕಣ್ಣು ಮುಂದೆ ನಿಂತ ಹಾಗಾಗಿ ನನ್ನನ್ನು ಕಾಡಿಸ ಹತ್ತುತ್ತವೆ. ಸ್ಕೂಟರಿನಲ್ಲಿ ಬರುತ್ತಿದ್ದಾಗ ನನ್ನ ಮನೆಯಿಂದ ಸ್ವಲ್ಪ ದೂರದಲ್ಲಿರುವ ಏಕಾಂತ ಸ್ಥಳದಲ್ಲಿ ಯಾರಾದರೂ ರೌಡಿಗಳು ಅವರನ್ನು ಹಿಡಿದು ಚಾಕು ತೋರಿಸಿ ವಾಚು, ಪರ್ಸನ್ನು ಕದ್ದಿರಬಹುದೇ ಅನ್ನಿಸುತ್ತದೆ.

ನಾನು ಗಂಡನಿಗಾಗಿ ಕಾಯುತ್ತ ನಿಂತಾಗಲೂ ಇಂಥ ಚಿಂತೆಗಳೇ. ನನ್ನ ಬಳಿಯಲ್ಲಿ ನಿಂತವ ಸಭ್ಯನೇ ಇರಬಹುದು. ತಲೆ ಕೆದರಿಕೊಂಡು ಕೈಲಿ ಸಿಗರೇಟು ಹಿಡಿದು ನನ್ನನ್ನೇ ಅವನು ದುರುಗುಟ್ಟಿ ನೋಡಿದಾಗ ಇವನು ನನಗೆ ಯಾವ ಆಪತ್ತನ್ನು ತಂದೊಡ್ಡಲು ಪ್ರಯತ್ನಿಸುತ್ತಿದ್ದಾನೆ ಎಂಬ ಅನುಮಾನ.

ನಾನು ಮೊದಲು ಹೇಳಿದ ಹೆಂಗಸರಿಗೆ ಗಂಡನ ಮೇಲಾಗಲಿ, ಮಗುವಿನ ಮೇಲಾಗಲಿ ನನಗಿಂತ ವಿಶ್ವಾಸ ಕಡಿಮೆಯಲ್ಲ. ಆದರೆ ಕಣ್ಣಾರೆ ಕಂಡದ್ದು, ಅವ ರಿವರಿಂದ ಕಿವಿಗೆ ಬಿದ್ದ ಸಂಗತಿಗಳನ್ನು ಅವರು ತಿಳಿದುಕೊಳ್ಳುತ್ತಾರಾದರೂ, ತಾವ ರಿಯದ ದೂರದ ಜಾಗವೊಂದರಲ್ಲಿ ನಡೆದ ಪ್ರಸಂಗವನ್ನು ತಮ್ಮ ಸಂದರ್ಭಕ್ಕೆ ತಾಳೆ ಹಾಕುವ ಜಾಯಮಾನವನ್ನಂತೂ ಅವರೆಂದೂ ರೂಢಿಸಿಕೊಂಡಿರುವುದಿಲ್ಲ. ಆದರೆ ಸುತ್ತಮುತ್ತಲಿನ ಪರಿಸ್ಥಿತಿಯನ್ನು ತಿಳಿದುಕೊಳ್ಳುತ್ತ, ಪತ್ರಿಕೆ ಪುಸ್ತಕವನ್ನು ಓದಿಕೊಳ್ಳುವ ನನಗೆ ಸಂಕೀರ್ಣಗೊಳ್ಳುತ್ತಿರುವ ಈ ಸಮಾಜ ಇಂಥ ಮಾನಸಿಕ ಮುಜುಗರಗಳನ್ನು ತಂದುಕೊಡುತ್ತದೆ. ಜೀವನ ನಡೆಸುವಲ್ಲಿ ಎಚ್ಚರವಾಗಿರುವು ದನ್ನು ಇವು ಕಲ್ಪಿಸಿಕೊಟ್ಟರೂ ಅನೇಕ ಸಂದರ್ಭಗಳಲ್ಲಿ ನನ್ನ ಆತಂಕವನ್ನು ನನ ಗಿರುವ ತಿಳುವಳಿಗೆ ಅತಿರೇಕದ ಅಂಚಿಗೆ ಮುಟ್ಟಿಸುತ್ತದೆ.

ಸಾರ್ವಜನಿಕ ಸ್ಥಳದಲ್ಲಿ ಕೆಲಸ ಮಾಡುತ್ತಿರುವ ನನಗೆ ಈಗ ಮನುಷ್ಯ ಸ್ವಭಾವ ನನ್ನ ಈ ತಿಳುವಳಿಕೆಯಿಂದಾಗಿ ನಿಗೂಢ. ನನ್ನ ಅಜ್ಜಿ, ಮುತ್ತಜ್ಜಿ ಇವರಿಗೆ ಮನೆಗೆ ಬಂದು ಬಾಗಿಲು ತಟ್ಟಿದವರ್‍ಯಾರ ಮೇಲೂ ಎಂದೂ ಗುಮಾನಿ ಬರುತ್ತಿರಲಿಲ್ಲ. ಅವರ ಕಾಲದಲ್ಲಂತೂ ಮನೆಯ ಮುಂಬಾಗಿಲು ಸದಾ ತೆರೆದೇ ಇರುತ್ತಿತ್ತು. ಬಂದವ ಆಗುಂತಕನೇ ಇರಬಹುದು. ಅವನಿಗೆ ನೀರಡಿಕೆಯಾಗಿರಲಿ ಬಿಡಲಿ, ಇವರಂತೂ ಅವನನ್ನು ಸತ್ಕರಿಸುತ್ತಿದ್ದರು. ಗಂಡಸಿಲ್ಲ ಎಂಬ ಕಾರಣ ಕ್ಕಾಗಿ ಅವರು ದುಡ್ಡುಕಾಸಿನ ವ್ಯವಹಾರವನ್ನು ಮಾಡುತ್ತಿರಲಿಲ್ಲ ಎಂಬುದರ ಹೊರತಾಗಿ ಮಿಕ್ಕ ವಿಷಯಕ್ಕೆ ಅವರಿಗೆ ಗಂಡಸಿನ ಹಾಜರಾತಿ ಇಲ್ಲದ್ದು ಗೌಣ ವಾಗುತ್ತಿತ್ತು. ಆದರೆ ಮನುಷ್ಯ ಸ್ವಭಾವದ ವಿವಿಧ ಮುಖಗಳನ್ನು ಕಂಡಿರುವ

ನನಗೆ ಬಾಗಿಲು ತಟ್ಟಿದ ಯಾರನ್ನೂ ತಟ್ಟನೆ ಒಳಬರಮಾಡಿಕೊಳ್ಳಲಾಗದು. ಲೈಟಿನ ಮೀಟರ್ ರೀಡಿಂಗಿಗೆ ಈ ತಿಂಗಳು ಹೊಸದಾಗಿ ನೇಮಕವಾದ ಒಬ್ಬಾತ ಬಂದರೆ. ನೀರಿನ ಮೀಟರ್ ನೋಡಲು ಬಂದವ ನನಗೆ ಪರಿಚಿತವಿಲ್ಲದಿದ್ದರೆ ಇವನು ನಿಜವಾಗಿಯೂ ಆ ಇಲಾಖೆಗೆ ಸೇರಿದವನೇ ಎಂದು ಚಿಂತೆ. ಮನೆಗೆ ಕ್ಯಾನ್‌ವಾಸ್ ಮಾಡಲು ಬರುವ ಹುಡುಗಿ ಮಾರಾಟದ ನೆಪದಲ್ಲಿ ಮತ್ತಿನ್ಯಾರಾರನ್ನೋ ಕರೆತಂದರೆ ಎಂಬ ಭೀತಿ. ಭೇಟಿಯಾಗುವ ಜನರಲ್ಲಿ ದಿಟ ಯಾರು ಸುಳ್ಳು ಯಾರ್ರು ಎಂದು ಅವರ ಮನಸ್ಸನ್ನು ಮುಖವನ್ನು ಪರೀಕ್ಷಿಸುತ್ತ, ಅವರ ಬಗ್ಗೆ ಮನಸ್ಸಿನಲ್ಲಿ ನಾನಾ ಅಭಿಪ್ರಾಯಗಳನ್ನು ಮೂಡಿಸಿಕೊಳ್ಳುತ್ತ, ನನ್ನ ಅಸೆಸ್‌ಮೆಂಟ್ ಸುಳ್ಳಾದಾಗ ನವೆದು, ನಿಜವಾದಾಗ ಹಿಗ್ಗಿ ಸಲ್ಲದ ಸರಕನ್ನು ತಲೆಯೊಳಕ್ಕೆ ತುಂಬಿಕೊಳ್ಳುತ್ತ. ನನಗೆ ಯಾವ ರೀತಿಯಲ್ಲೂ ಸಂಬಂಧವಿರದ ಸಾರ್ವಜನಿಕರ ಸ್ವಭಾವವನ್ನೆಲ್ಲ ಅರಗಿಸಿಕೊಳ್ಳಲು ಪ್ರಯತ್ನವಂತೂ ದಿನವೂ ಗಂಟೆಗಟ್ಟಲೆ ಕಾಲ.

ಬದುಕಿನ ಬಗ್ಗೆ ಇದ್ದ ಅಗಾಧ ಮುಗ್ಧತೆಯನ್ನು ನಾನು ಪರಿಸ್ಥಿತಿಯ ಸುಳಿಗೆ ಸಿಕ್ಕಿ ಕಳೆದುಕೊಳ್ಳುತ್ತಿದ್ದೇನೆ. ಆದ್ದರಿಂದಲೆ ಈ ಅನಿಶ್ಚಯತೆ, ಈ ಆತಂಕ. ನನ್ನ ಹಿರಿಯರು ಅಥವಾ ನನ್ನ ಜತೆಯಲ್ಲಿರುವ ಅಮಾಯಕ ಜನರಿಗೆ ಬದುಕಿನ ಕ್ರೂರತೆ ಹಾಗೂ ವ್ಯಂಗ್ಯ ಇವು ಬಡತನ, ಮನಸ್ತಾಪ, ಜಗಳ-ಕದನ ಇವಕ್ಕೆ ಮಾತ್ರ ಸೀಮಿತವಾಗಿತ್ತು. ಆದರೆ ಜೀವನದ ಬಗೆಗಿನ ಅವರ ಒಟ್ಟು ದೃಷ್ಟಿ ನನ್ನದಕ್ಕಿಂತಲೂ ಹೆಚ್ಚು ಸುಂದರವಾಗಿತ್ತು.

ಕತ್ತಿನ ಬಳಿ ಒಂದು ಸಣ್ಣ ಊತ ಕಾಣಿಸಿಕೊಂಡರೆ ಅದು ಕ್ಯಾನ್ಸರ್ ಇರಬಹುದೆಂದು, ಗಂಟಲು ನೋವಾದ ಕೂಡಲೆ ಅದು ಡಿಫ್ತೀರಿಯಾ ಇರಬಹುದೆಂದು ಅವರೆಂದೂ ಹೌಹಾರುತ್ತಿರಲಿಲ್ಲ. ಮಕ್ಕಳ ವೈವಾಹಿಕ ಜೀವನ ಸುಗಮವಾಗಿರಲಿ ಎಂದೂ ಹಾರೈಸಿದರೂ ಅದು ಹಳಿ ತಪ್ಪಿದಲ್ಲಿ ಏನು ಪರಿಹಾರ ಎಂಬ ಆಲೋಚನೆ ಅವರಿಗೆ ಬರುತ್ತಿರಲಿಲ್ಲ. ಮನೆಯಿಂದ ಹೊರಟಾಗ ನನಗೆ ಅಪಘಾತವಾದರೆ ಮಿಕ್ಕವರಿಗೆ ಯಾರು ದಿಕ್ಕು ಎಂಬ ಕೆಟ್ಟ ಚಿಂತೆಗಳು ಮೂಡುತ್ತಲೇ ಇರಲಿಲ್ಲ. ಅನೇಕ ತಲೆಮಾರುಗಳ ಭವಿಷ್ಯವನ್ನು ರೂಪಿಸುವ ಛಾತಿ ಅವರಲ್ಲಿತ್ತು, ಜೀವನ ಅವರ ನಿರ್ದೇಶನವಲ್ಲೇ ನಡೆಯುತ್ತಿದೆಯೇನೋ ಅನ್ನಿಸುತ್ತಿತ್ತು.

ಆದರೆ ನನ್ನ ಪಾಲಿಗೆ ಈ ಪರಿಕರಗಳಿಲ್ಲ. ನಿಂತ ನೆಲೆಗಟ್ಟು ಸಡಿಲಗೊಳ್ಳುತ್ತಿದೆಯೆಂಬ ಹೆದರಿಕೆಯಿಂದಲೇ ನಾನು ಅದರ ಮೇಲೆ ಭವಿಷ್ಯವನ್ನು ನಿರ್ಮಾಣ ಮಾಡುತ್ತೇನೆ. ಮುಂದೆ ಮಾರ್ಗವಿದೆಯೋ ಇಲ್ಲವೋ ಎಂಬ ಭೀತಿಯಿಂದಲೇ ನಡೆಯತೊಡಗುತ್ತೇನೆ. ಆಕಾಶದಲ್ಲಿನ ನಕ್ಷತ್ರಗಳನ್ನು ಎಣಿಸುತ್ತ, ಅದರ ಎತ್ತರಕ್ಕೆ ಚಿಮ್ಮುವ ಉತ್ಸಾಹ ಮೂಡುತ್ತಿರುವಾಗಲೇ, ನನ್ನ ತಲೆಯ ಮೇಲಿನ ಸೂರು ಭದ್ರವೇ ಎಂದು ಮುಟ್ಟಿ ನೋಡಿಕೊಳ್ಳುತ್ತೇನೆ.

# ಬರವಣಿಗೆಯ ಹಿಂದೆ

—ಎಚ್. ಎಸ್. ವೆಂಕಟೇಶಮೂರ್ತಿ

ಬಾಲ್ಯದಲ್ಲಿ ಸಾಕಷ್ಟು ನೋವಿನ, ಅಪಮಾನದ, ಆತ್ಮಹಿಂಸೆಯ ಅನುಭವಗಳನ್ನು ನಾನು ಪಡೆಯಬೇಕಾಗಿ ಬಂತು. ಇನ್ನೊಬ್ಬರಿಗೆ ಹೇಳಿ ಕಳೆದುಕೊಳ್ಳುವಂಥವಾಗಿರಲಿಲ್ಲ ಅವು. ಅಥವ ಅಂಥ ನೋವುಗಳೇ ಆಗಿನ ನನ್ನ ಅಸ್ತಿತ್ವವಾಗಿದ್ದವೇನೋ. ಅವಿಲ್ಲದೆ ನಾನು ಖಾಲಿ-ಖಾಲಿಯಾಗಿ, ಬರಿದಾಗಿಬಿಡಬಹುದಾಗಿತ್ತು. ಆಗ ಬರವಣಿಗೆ ಹೇಳಿಯೂ ಖಾಲಿಯಾಗದ ಒಂದು ಕ್ರಿಯೆಯಾಗಿ ನನ್ನ ಸಹಾಯಕ್ಕೆ ಒದಗಿರಬಹುದೆಂದು ಈಗ ಅನ್ನಿಸುತ್ತಿದೆ. ಯಾಕೆಂದರೆ ಬರವಣಿಗೆ ನಮ್ಮ ಅನುಭವಗಳನ್ನು ಚದುರದಂತೆ ಕಟ್ಟಿಡುವ ಒಂದು ಕ್ರಮವಾಗಿರುತ್ತದೆ.

ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ಗೆಳೆಯನೊಬ್ಬನ ಸಹಾನುಭೂತಿ ಮತ್ತು ಪ್ರೀತಿ ನನಗೆ ದೊಡ್ಡ ಆಸರೆಯಾಗಿತ್ತು. ಇಂಥ ಪ್ರೀತಿಯೇ ಒಬ್ಬನಿಗೆ ಆತನ ಬಗ್ಗೆಯೇ ನಂಬಿಕೆ ಕುದುರಿಸುವ ಸಂಗತಿ. ಬೇರೆಯವರ ತೀವ್ರವಾದ ಪ್ರೀತಿ (ಅಥವ ದ್ವೇಷ) ನನಗೆ ನಾನು ಇದ್ದೇನೆ ಎಂಬ ನಂಬಿಕೆ ತರುತ್ತದೆ. ಹಿಂದಿನ ಸಂಗತಿ ಹೇಳುತ್ತೇನೆ. ವಾರಕ್ಕೆ ಒಂದು ಪತ್ರ ಬರೆದು ನನ್ನ ಆ ಅಗತ್ಯವನ್ನು ತುಂಬುತ್ತಿದ್ದ ಆ ಗೆಳೆಯ ಒಮ್ಮೆ ತಿಂಗಳಾದರೂ ಒಂದು ಪತ್ರ ಬರೆಯಲಿಲ್ಲ. ನನಗೆ ಕಳೆದು ಹೋಗುತ್ತಿರುವ ಭಾವನೆ ತೀವ್ರವಾಗತೊಡಗಿತು. ಆಗ ಗೆಳೆಯನಿಗೆ ಪತ್ರ ಬರೆಯುವ ಬದಲು ಒಂದು 'ಪದ್ಯ'ವನ್ನು ಬರೆಯತೊಡಗಿದ್ದೆ ನಾನು ! ಪ್ರಾಯಶಃ ಆ ಪದ್ಯ ಆ ಗೆಳೆಯನನ್ನು ಉದ್ದೇಶಿಸಿದ್ದಾಗಿರುವುದಿಲ್ಲ. ಅವನು ಅದನ್ನು ಓದ

---

**ಕಾವ್ಯ ರಚನೆಯಲ್ಲಿ ಗಂಭೀರವಾಗಿ ತೊಡಗಿರುವ ಇತ್ತೀಚಿನ ಕೆಲವರನ್ನು ; ಅವರ ರಚನಾ ವಿಧಾನದ ಹಿನ್ನೆಲೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಬರೆದುಕೊಡಲು ಕೇಳಿಕೊಂಡೆವು. ಇದರಲ್ಲಿ ಮೊದಲನೆಯದಾಗಿ ವೆಂಕಟೇಶಮೂರ್ತಿಯವರು ತಮ್ಮ ಅನುಭವವನ್ನು ಬರೆದುಕೊಟ್ಟಿದ್ದಾರೆ. ಅವರಿಗೆ ಶೂದ್ರ ಋಣಿಯಾಗಿದೆ. ಸಂ.**

---

ಬೇಕೆಂಬ ಅಪೇಕ್ಷೆಯೂ ಇರುವುದಿಲ್ಲ. ನೋವನ್ನು ಹೀಗೆ ಕಾದಿರಿಸಿಕೊಳ್ಳುವ ಸಂಗತಿ ಬಹಳ ವಿಚಿತ್ರದ್ದು ಎನಿಸುತ್ತದೆ ನನಗೆ.

ಹೀಗೆ ಅನುಭವವನ್ನು ಕಟ್ಟಿಡುವ ಗಳಿಗೆಯಲ್ಲೇ ವಿವರಗಳು ಸಾರ್ವತ್ರಿಕವಾಗುವ ಅಂದರೆ ಪ್ರತೀಕಾತ್ಮಕವಾದ ಸಂಗತಿ ಸಂಭವಿಸುವುದು. ಮೂಲದಲ್ಲಿ ನನ್ನ ಗೆಳೆಯನಿಗೆ ಖಚಿತವಾದ ರೂಪ, ಸ್ಥಳ, ಕಾಲ ನಿರ್ದೇಶನಗಳಿದ್ದುವಲ್ಲ ? ಈಗ ಗೆಳೆಯ ಮೂಲವಸ್ತು ಅನ್ನುವುದಕ್ಕಿಂತ ಒಂದು ಸಂಗತಿಯಾಗಿ ಪರಿಣಮಿಸಿದ ಕವಿತೆಯನ್ನು ಓದುವ ಓದುಗ ಗೆಳೆಯನನ್ನು ಹೇಗೆ ಗ್ರಹಿಸುತ್ತಾನೆ ? ತನ್ನ ಕಲ್ಪನೆಗೆ ತಕ್ಕಂತೆ ತಾನೆ ? ಹೀಗೆ ನಿತ್ಯದ ವಸ್ತುಗಳನ್ನು ಪ್ರತೀಕವಾಗಿ ಪರಿವರ್ತಿಸುವುದರಲ್ಲೇ ಬರವಣಿಗೆಯ ಗುಟ್ಟು ಅಡಗಿದೆಯೇನೋ. ಒಂದು ನಿಶ್ಚಿತ ರೂಪ ಕಾಲ ದೇಶ ಸ್ಥಿತಿಗಳ ಬಂಧನದಿಂದ ಕವಿ ವಸ್ತುಗಳನ್ನು ಸ್ವತಂತ್ರಗೊಳಿಸುತ್ತಾ ಹೋಗುತ್ತಾನೆ. ಹೀಗೆ ವಸ್ತುಗಳನ್ನು ಸ್ವತಂತ್ರಗೊಳಿಸುವಲ್ಲಿ ಕವಿಗೆ ಅತ್ಯಗತ್ಯವಾದ ಅಂಶವೆಂದರೆ ಒಂದು ಅದ್ಭುತವಾದ 'ಮಗ್ನತೆ' ಎಂದು ನನ್ನ ಭಾವನೆ. ಮೂಲ ವಸ್ತುವನ್ನು ಬಿಡುಗಡೆಗೊಳಿಸುವುದು ಬರವಣಿಗೆಯನ್ನು ಅತ್ಯಂತ ರೋಮಾಂಚಕಗೊಳಿಸುವ ಸಂಗತಿ.

ಆದರೆ ಬರವಣಿಗೆಯೆಲ್ಲಾ ಹೀಗೆ ಏಕಾಗ್ರತೆಯ ಅಪೂರ್ವ ಕ್ಷಣಗಳಲ್ಲೇ ಹುಟ್ಟುತ್ತದೆಂದು ನಾನು ಭಾವಿಸುವುದಿಲ್ಲ. ಅನೇಕ ಸಾರಿ ಒಂದು ರಂಜಕ ಆಟದ ಹಾಗೆಯೂ ಬರವಣಿಗೆ ನಡೆಯಬಹುದು. ಎರಡಕ್ಷರದ ಒಂದು ಶಬ್ದಕ್ಕೆ ಮೂರು ಅಥವಾ ನಾಲ್ಕು ಅಕ್ಷರದ ಒಂದು ಶಬ್ದವನ್ನು ಪ್ರಾಸವಾಗಿ ಜೋಡಿಸಿದಾಗ ಕೂಡ ನನಗೆ ಸಂತೋಷವಾದದ್ದಿದೆ. ನಮ್ಮ ಕೇಳುವ, ನೋಡುವ, ಜೋಡಿಸುವ ಉಪಕರಣಗಳನ್ನು ಬಾಯಿ ಮೊಂಡಾಗದಂತೆ ಇಟ್ಟುಕೊಳ್ಳಲು ಇಂಥ ಆಟಗಳು ನೆರವಿಗೆ ಬರುತ್ತವೆ. ಸ್ಪರ್ಧೆಯ ಆಟದ ಮೊದಲಿನ ನೆಟ್ ಅಭ್ಯಾಸದ ಹಾಗೆ ಇಂಥ ಪ್ರಯತ್ನಗಳು ಎನ್ನಬಹುದು. ಜೋತಾಡುವ ವಸ್ತುಗಳು, ಹಂಪೆಗೆ ಬಂದರೆ ಮುಂತಾದ ರಂಜಕ ಪ್ರಯತ್ನಗಳು ಈ ಬಗೆಯವು. ಸಂಬಂಧ ಕವಿತೆಗಳ ದೃಷ್ಟಿಯ ಕ್ಷಣದಲ್ಲಿ ಎದುರಿಸುವ ತಪ್ತತೆ, ಮಗ್ನತೆ, ಆತಂಕದ ಕ್ಷಣಗಳು ಇಂಥ ಆಟದ ಕವಿತೆಗಳನ್ನು ಕಟ್ಟುವಾಗ ಇರುವುದಿಲ್ಲ. ಆದರೆ ಕಟ್ಟುವ ಕ್ರಿಯೆಯ ಅನುಭವ, ಗಂಭೀರ ಪ್ರಯತ್ನಗಳಲ್ಲಿ ತನ್ನಷ್ಟಕ್ಕೇ ಒದಗಿಬರುತ್ತವೆ ಎಂಬುದೇ ವಿಶೇಷವ ಸಂಗತಿ.

ನಾನು ಹಿಂದೆ ಬಳಸಿದ 'ಮಗ್ನತೆ' ಎಂಬ ಮಾತು ಮೂಲ ವಸ್ತುವಿನಲ್ಲಿ ಪೂರ್ತಿ ಮುಳುಗಿ ಹೋಗುವುದು ಎಂಬುದನ್ನು ಸೂಚಿಸುವುದಿಲ್ಲ ಎಂದು ಭಾವಿಸು

ತ್ತೇನೆ. ಬರೆಯುವಾಗ ಲೇಖಕ ಎಲ್ಲಿರುತ್ತಾನೆ ಎಂಬುದು ಬಹಳ ತಲೆ ಕೆಡಿಸುವ ಸಂಗತಿ.

ಒಂದು ಕೃತಿಯಲ್ಲಿ ಚಲಿಸುವ ಮತ್ತು ಚಲಿಸದಿರುವ ಸಂಗತಿಗಳಿರುವವಷ್ಟೆ ? ಉದಾಹರಣೆಗೆ 'ಶಿಶಿರದ ಹಾಡು' ಎಂಬ ಕವಿತೆಯಲ್ಲಿ ಕಾಡು, ಕೊಳ, ಬೆಟ್ಟ ಇವುಗಳ ಜೊತೆ ವಾಲ್ಮೀಕಿ ಮತ್ತು ಸೀತೆ ಇದ್ದಾರೆ. ಆಕಾಶವಿದೆ. ಚಲಿಸುವ ಮೋಡಗಳಿವೆ. ಮರವಿದೆ. ಉದುರುವ ಎಲೆಗಳಿವೆ. ಲೇಖಕ ಬರೆಯುವ ಕ್ರಿಯೆಯಲ್ಲಿ ತೊಡಗಿದಾಗ ವಾಲ್ಮೀಕಿ ಮತ್ತು ಸೀತೆ ಚಲಿಸುತ್ತಿರುವ, ಕಾಡಿನಲ್ಲಿಯೇ ಇದ್ದಾನೆ. ಅವರಿಗೆ ಕಾಣದಂತೆ. ಆದರೆ ತನಗೆ ಅವರು ಸ್ಪಷ್ಟ ಕಾಣದಂಥ ನೆಲೆಯಲ್ಲಿ. ಆದರೆ ಯಾವಾಗಲೂ ಹಾಗೆ ಹೊರಗೇ ಇರುವುದಿಲ್ಲ. ಸೀತೆಯ ಮನಸ್ಸನ್ನೇ ತಿಳಿಯುವಾಗ ಪಾತ್ರದ ಒಳಗೇ ಆತ ಪ್ರವೇಶಿಸಬೇಕಾಗುತ್ತದೆ. ಆ ಮನಸ್ಸನ್ನು ಕಾಣಿಸುವ ಅಂಗ ಭಂಗಿಗಳನ್ನ, ನಿಲುವನ್ನ ಕಾಣಿಸುವಾಗ ಪಾತ್ರದ ಹೊರಗೆ ಬಂದು ನಿಲ್ಲುತ್ತಾನೆ. ಆದರೆ ಕವಿತೆಯ ಒಟ್ಟು ವಾತಾವರಣದಿಂದಂತೂ ಅವನು ಹೊರಗಿರುವುದಿಲ್ಲ. ಆ ರೀತಿ ಹೊರಗಾದಾಗ ಅವನಿಗೆ ಆಟದ ಕವಿತೆ ಬರೆಯುವುದು ಮಾತ್ರ ಸಾಧ್ಯವಾಗುತ್ತದೆ.

ಕವಿತೆ ಸಾಂದ್ರವಾಗುವುದು ಕವಿ ತನ್ನ ವಸ್ತುವನ್ನು ಎಷ್ಟು ದಿಕ್ಕಿನಿಂದ ನೋಡಬಲ್ಲ ಎಂಬುದನ್ನು ಅವಲಂಬಿಸಿದೆ. ಇಲ್ಲಿ 'ನೋಡುವುದು' ಕಾಣುವುದು ಮಾತ್ರವಲ್ಲ 'ಚಿಂತಿಸುವುದೂ' ಆಗುತ್ತದೆ. ಕವಿತೆ ನೋಡಿದ್ದರ ಫಲ ಮಾತ್ರ ಆಗಿದ್ದರೆ ಅದು ಚೆಲುವಾದ ಆದರೆ ಸರಳವಾದ ಕವಿತೆ ಮಾತ್ರ ಆಗುತ್ತದೆ. ಕವಿತೆ 'ನೋಡಿದ್ದರ' ಮತ್ತು 'ಚಿಂತಿಸಿದ್ದರ' ಒಟ್ಟಾರೆ ಫಲವಾಗಿದ್ದರೆ ಚೆಲುವಾದ್ದೂ, ಘನವಾದ್ದೂ ಆಗುತ್ತದೆ. ಕೇವಲ ಚಿಂತಿಸಿದ್ದರ ಫಲವೇ ಆಗಿದ್ದರೆ ಅಮೂರ್ತವೂ, ಅಕಾವ್ಯವೂ ಆಗುತ್ತದೆ.

ಮೊದಮೊದಲು ಕಾವ್ಯವಸ್ತುವನ್ನು ನಾನು ಹುಡುಕಿಕೊಂಡು ಹೋಗುತ್ತಿದ್ದೆ. ಈಗ ಅದು ಅರ್ಥಹೀನ ಅನಿಸುತ್ತಿದೆ. ಹುಡುಕಿಕೊಂಡು ಹೋಗಿ ದೊಡ್ಡದನ್ನು ಬರೆಯಲು ಯತ್ನಿಸುವುದಕ್ಕೆ ಬದಲು ರಂಜಕವಾದ ಕವಿತೆಯ ಆಟಗಳನ್ನು ಆಡಿಕೊಂಡಿರುವುದೇ ಮೇಲು. ಪುಣ್ಯವಿದ್ದರೆ ಘನವಾದ ಕಾವ್ಯವಸ್ತು ತನ್ನ ಕಣ್ಣೆದುರೇ ಸಂಭವಿಸುತ್ತದೆ. ಹಲವು ದಿಕ್ಕಿನಿಂದ ಬೆಳಕು ಬಿದ್ದು, ವಸ್ತುವಿಗೆ-ಒಂದು ಕಪ್ಪು ನೆರಳಲ್ಲ— ಹಲವು ಬಣ್ಣದ ನೆರಳು ಮೂಡುತ್ತವೆ. ಬೇರ್ಪಡಿಸಲಾಗದಂತೆ ಆ ಬಣ್ಣಗಳು ಒಂದರಲ್ಲೊಂದು ಹೊಂದಿಕೊಂಡು ಬರುತ್ತವೆ. ಅಂಥ ಘಳಿಗೆಯನ್ನು ಕಾಯುತ್ತಾ ಶೂನ್ಯದಲ್ಲಿ ಕಣ್ಣಿಟ್ಟು ಕೂಡುವುದಷ್ಟೇ ಕವಿ ಮಾಡಬಹುದಾದ ಕೆಲಸ.

# ತಿಂಗಳ ಕಾವ್ಯ

## ಒಂದಿರುಳು

ಯಾರೋ ದ್ರುತಗತಿಯಲ್ಲಿ ನುಡಿಸುವ
ಸಿತಾರ್ ವಾದನದ ಸ್ವರ ತಂತುರಾಗಿದೆ, ಈ
ಚಿಕ್ಕೆ ಕಿಕ್ಕಿರಿದಿರುವ ಆಕಾಶ.
ಕಿಡಿ ಕಿಡಿ ಸಿಡಿದು ವಿಜೃಂಭಿಸಿದೆ
ದೀಪಕ ರಾಗ ನಭೋ ಭವನದಲಿ
ಪಡಿನುಡಿಯುತ್ತ,
ಕೆಳಗೆ ಮಲಗಿದೆ ತಪ್ತ ಸೀರವ ಪೃಥುವಿ
ಕನಸೂ ಕಾಣುತ್ತ.

—ಜಿ. ಎಸ್. ಶಿವರುದ್ರಪ್ಪ

## ಸುಖದ ವಸಂತ ಕಲ್ಪನೆ

ಪಳಪಳನೆ ಕಣ್ಣರಳಿಸಿ
ಸಹಜ ಬಯಕೆ ಸರಸಕಾಗಿ
ಕಾಲಮಾನ ಬದಿಗೆ ಸರಿಸಿ
ಯಾಕೆ ಬರುವೆ ನನ್ನನರಸಿ

ಮಧುರ ಸ್ವರದ ಇಂಪಿನಿಂದ
ತಂಪು ಮನದ ಕಂಪಿನಿಂದ

ಮುಗ್ಧ ಮುಖದ ಕಾಂತಿಯಿಂದ
ಸೂರೆಗೊಂಡ ಮನಕೆ ಇಂದು

ಆಶೆ ಎಂಬ ಆಗಸಕ್ಕೆ
ಮೋಡಗಳನು ಆಡಬಿಟ್ಟು
ಚುಕ್ಕಿ ಹಚ್ಚಿ ಮಿನುಗಿಸಿ
ಮನದ ಚಂದ್ರ ಮೂಡಿಸಿ

ಸವಿಯು ಸವಿಯು ಜೇನ ಮುತ್ತು
ಪ್ರೀತಿಯೊಂದೆ ನನ್ನ ಸೊತ್ತು
ಬನದ ಸಿರಿಯು ಅರಮನೆ
ಸುಖದ ವಸ್ತು ಕಲ್ಪನೆ.

—ಶಂಕರ ಪಾಟೀಲ

## ವಿಧುರನೊಬ್ಬನ ಸ್ವಗತ

ನನ್ನ ಕಣ್ಣುಗಳೊಳಗೆ ನೀ ನಿಟ್ಟಿರುವ
ನೀರಿನರವಟ್ಟಿಗೆಯು ಮುಂದೆ
ಬಾಯೊಣಗಿಸಿಕೊಂಡಿರುವರೋ
ಟಿ ನೆನಪುಗಳ ಸರತಿ ಸಾಲು
ನಿಟ್ಟುಸಿರ ಕಮ್ಮಟದಲ್ಲಿ
ಶಿಲ್ಪವಾಗುವ ಎದೆಯು ಬದಿ
ತೈಲವರ್ಣದ ಒಲುಮೆಯು
ಸ್ಥಿರಚಿತ್ರಗಳು
ಚುಂಬನ ಮುಂಜುಂಗಡ್ಡೆಯ ಮಹಲು
ಕರಗುತ್ತಿದೆ ಕಾಂಚನಗಂಗದ ತಪ್ಪಲಲ್ಲು

ಮುಂಗುರಿಸಿದ ಝೇಲುಂ ಬಿಟ್ಟ ಹೊಗೆ
ನೆಗೆಯಲಾರದೆ ಮುಗಿಲಿಗೆ

ಗಂಟಲಲ್ಲುತ್ಕಟವಾಗಿ
ಸಂಯಮ್ಯವ ನಿಟ್ಟುಸಿರುಗಳಲ್ಲಿ ಹೆಪ್ಪುಗಟ್ಟಿದೆ

ಅರ್ಥಸ್ಪುರಿಸದಕ್ಷರಗಳವಿಡತೆದಾಳಿ
ಚೀನಿಯಂ ಅಡ್ಡಗೋಡೆ ಸೀಳಿ
ಸಾಗಿಬರುತ್ತಿದೆ ಬದುಕಿನ ಮರುಭೂಮಿಯಂ ಕಡೆಗೆ
ಒಯಸಿಸ್ಸಿನಲ್ಲಿರುವುದೂ ನೀರಲ್ಲ
ಬಸಿದಿಟ್ಟ ರಕ್ತ
ಅಂತ ಅದಕ್ಕೇನು ಗೊತ್ತು : ಪಾಪ

ವಿರಕ್ತತೆಯಂ ನೀಲಿ ನಭದಲ್ಲಿ
ಬಾಲಂಗೋಚಿ ಕಳಚಿದ ವರ್ತಮಾನ
ಕೆಳಕ್ಕಿಯುದೆ ಅಲ್ಲೆ ಆಗಬಹುದು
ಅಂತರ್ಧಾನ.

—ಕುಂ ವೀರಭದ್ರಪ್ಪ

## ಒಮ್ಮೆ ಕಂಡ ಮುಖ

ಅವಳು ಯಾರೊ ಅರಿಯೆ ನಾನು
ತುಂಟ ನಗೆಯು ಕಂಗಳು
ಎದೆಯು ಸೂರೆಗೊಂಡಳೆಂದು
ತೂಗಿ ಆಸೆ ಗೊಂಚಲು

ಮೊಗ್ಗು ಹಿಗ್ಗಿ ಬಿರಿಯಲೆಂದು
ಕಾದು ನಿಂತ ಕುಚಗಳು
ನಡುವಿಗಿಂತ ಸೀರೆ ಕೆಳಗೆ
ನಡುವೆ ಚುಕ್ಕಿ ಹೊಕ್ಕಳು

ನೀಲ ಬಾನು ನೀಲಿ ಸೀರೆ
ಅವಳ ಬಣ್ಣ ಶ್ಯಾಮಲ

ನೀರು ದುಡುಕಿ ತುಳುಕಿದಂತೆ
ಅವಳ ದನಿಯೊ ಮಂಜುಳ

ಭರತ ನಾಟ್ಯ ಕಲಿತ ನಡೆಗೆ
ನವಿಲು ಬಾಗಿ ನಿಲ್ಲನೆ,
ಕಳಿತ ಹಣ್ಣಿನ ರಸದ ರಂಜಿಗೆ
ಗಿಳಿಗಳೆರಗಿ ಬೀಳದೆ

ಯಾರ ಮುಡಿಗೆ ಕಾದ ಹೂವೊ
ಬರಲಿ ತುಂಬು ಜೀವನ
ಯಾವ ಘಳಿಗೆ ಕಂಡ ಕ್ಷಣವೊ
ಕರಗಿತೇಕೆ ವೈಮನ

—ಎಂ. ಎನ್. ವ್ಯಾಸರಾವ್

## ಮಳೆ ಮಲೆಯ ಪಾಡು-ಹಾಡು

೧ ಪಾಡು

ಮುಸುಕು ಮೊರೆದ ನಸುಕಿನಲ್ಲಿ ಉಧೋ ಉಧೋ ಮಳೆ
ಹೊಸಕಿ ಹರಿದ ನೀರಿನಲ್ಲಿ ತೊಯ್ದು ತೊಪ್ಪೆ ಇಳೆ
ಬಾನ ಚಿಕ್ಕೆ ಬೆಳಗಲಿಲ್ಲ ಹಕ್ಕಿ ಹಾಡು ಕೇಳಲಿಲ್ಲ
ಗುಂಡಿಯಲ್ಲಿ ಗೊಟರಿನಲ್ಲಿ ಕಪ್ಪೆಗಡಚು ನಿಲ್ಲಲಿಲ್ಲ.

ತೊಪ್ಪೆಯಾದ ಗುಡಿಸಲೊಳಗೆ ಹರಕು ಗೋಣಿ ತಾಟ ಕೆಳಗೆ
ಉಸಿರ ಬಿಸಿಯದೊಂದೆ ಹೊರಗೆ ಬೇರೇನಿಲ್ಲ ಇವನ ಪರಿಗೆ
ಮುದುಡಿಬಿದ್ದ ಮೂಲೆಯಿಂದ ಕೊರಗುತೆದ್ದ ಅಳಲಿನಿಂದ
ಕಿವಿಯುಗಡಚು ಒಳಗಿನರಚು ಇವನ ನಿದ್ದೆಗಾಗೆ ಪರಚು.

ಕಾಫಿಯಾಲ ಮಲೆಯ ಒಳಗೆ ಕರಗಿ ಹರಿವ ಜಿನುಂಗಿನೊಳಗೆ
ಹಗಲು ಇರುಳು ಒಂದೆ ಹಾಡು ಹಸಿದ ಬಿಸಿಯ ಹೊಟ್ಟೆಪಾಡು

ಹೊತ್ತ ಪಾಟಿ ಗೊರಗು ಭಾರ ಮತ್ತೆ ಧಣಿಯ ನೊಗದ ಹಾರ
ಸುತ್ತ ತಿರುಗಲೆತ್ತಲೂನು ಬಿಡುವ ಕೊಡದ ಕರ್ಣಧಾರ

ಕರುಳ ಕೊರೆವ ಚಳಿಯ ನಡುವೆ ರಗುತ ಕುಡಿವ ಜಿಗಣೆಯೊಡನೆ
ಬಸಿದ ಜಿನುಗು ಹೋದರಕ್ತ ಮಲೆಯ ಹಸಿರ ಉಸಿರಶಕ್ತ
ಹುಂಜಿಯಂತೆ ಹಿಂಜಿ ಸುರಿವ ಮಂಜು ಮಳೆಯ ಗಳೆಯ
ಅವನೆ ಉಡುಗೆ ಇವನ ತೊಡುಗೆ ನಿತ್ಯ ಬಡಿವ ಬಡಿಗೆ.

ಕಾಫಿಯಾಲ ಮೆಣಸು ಬಾಡದಿ ಕುಕ್ಕಿ ಕೆತ್ತಿ ಕರಗಿ ಕೊರಗಿ
ಕೊಳೆತ ಹಸಿರ ಕೆಸರ ತುಳಿದು ಕಾಲು ಚೆಲೆತು ಕೀವು ಬಾವು
ಭರ್ರೋಗಾಳಿ ಹೊಡೆದು ಬಡಿದು ಮೂಗು ನಿತ್ಯ ಯಮುನೆ ಗಂಗೆ
ಯಾವ ರಂಗ ಎಲ್ಲಿ ಸುಖ ನೋವು ಸಾವು ನರಕೆ ಲೋಕ

## ೨ ಹಾಡು

ನಸುಕು ಹರಿವ ಮುಸುಕಿನಲ್ಲಿ ತೋಂತ ತನನ ತಾನ ಮಳೆ
ಒಸಕಿ ಮೊರೆವ ನೀರಿನಲ್ಲಿ ಮೊಳಗಿ ತೊಳಗಿ ತಾನೆ ಇಳೆ
ಬೆಟ್ಟ ಕಣಿವೆ ಹಸಿರ ಉಸಿರು ಗಟ್ಟಿ ಬೆಳಕ ಬೆಳದ ಬಸಿರು
ಕಣ್ಣು ತಣಿವ ಹಬ್ಬ ನೋಡ ಬೀಸಿ ಹಾಸಿ ಕಡಿಮೆ ಮೋಡ

ಮಲೆಯ ನಡುವೆ ಮಲೆಕ ಬೀಸು ಒಡೆಯನಿವನ ಕಲೆಯ ಗೂಡು
ಹೆಂಡ ಖಂಡದೋಳಿಯಲ್ಲಿ ಕೆಣಕಿ ಕುಣಿವ ಹೆಣ್ಣನಲ್ಲಿ
ಮಲೆತ ಮಲೆಯು ಎಡೆಯ ತುಂಬೆ ಮಳೆಯ ಮೊಳಗಾನವಲ್ಲಿ !
ಗುನುಗು ಗುಂಗು ಭಾವದಲ್ಲಿ ಜನಂಗು ಚಳಿಯ ಪರಿವೆಯೆಲ್ಲಿ ?

ಮಲೆಯ ತುಂಬ ಹರಿವ ಗಾನ ಮನೆಯ ತುಂಬ ಝುನನ ಝಣಾನ
ಹಕ್ಕಿಯೇನು ಚಿಕ್ಕಿಯೇನು ಕುಣಿವ ಹೆಣ್ಣ ಕಣ್ಣೇ ಜೇನು
ಕಾರು ಜೀಪು ಪಯಣದಲ್ಲಿ ರಂಗು ರಂಗ ವನದ ಸಂಗ
ಇರುವ ತನಕ ಹರೆಯ ಬದುಕು ಕೊರತೆಯಿಲ್ಲ ಅದಕು ಇದಕು

—ಎಸ್. ಜಿ. ಸಿದ್ಧರಾಮಯ್ಯ

# ಒಂದು ಪತ್ರ

ಪ್ರಿಯ ಡಾ॥ ಶ್ರೀನಿವಾಸ ಗೌಡರೆ,

ನನಗೆ ಈ ಮೆಡಿಕಲ್ ಕಾಲೇಜುಗಳ ಬಗ್ಗೆ ಅಷ್ಟೇನೂ ತಿಳಿವಳಿಕೆ ಇಲ್ಲವಾದರೂ ಕೇವಲ ನಿಮ್ಮ ವಿಶ್ವಾಸದ ಬಲದಿಂದ ನಿಮ್ಮ ಸ್ಮರಣ ಸಂಚಿಕೆಗೆ ಒಂದು ಸಣ್ಣ ಲೇಖನ ಕೊಡಬೇಕೆಂದು ಬಲವಂತ ಮಾಡಿದ್ದೀರಿ. ಪತ್ರಕರ್ತನಾದವನು ಯಾವುದೇ ವಿಷಯದ ಬಗ್ಗೆ ಸರ್ವಜ್ಞನ ಧಾಟಿಯಲ್ಲಿ ಬರೆಯಬೇಕಾದ್ದು ಕರ್ತವ್ಯವೆಂದು ಬಹಳ ಜನ ತಿಳಿದಿದ್ದಾರೆ ; ನಿಮ್ಮಲ್ಲೂ ಈ ಅನುಮಾನ ಇರಬಹುದು.

ನಿಮಗೆ ಗೊತ್ತಿರಲಿಕ್ಕಿಲ್ಲ, 1955 ರಲ್ಲಿ ಕೊಂಚ ಹೆಚ್ಚು ಕಮ್ಮಿಯಾಗಿದ್ದರೆ ನಾನು ಡಾಕ್ಟರಾಗಿಬಿಡುತ್ತಿದ್ದೆ. ಜ್ಯೂನಿಯರ್ ಇಂಟರ್‌ನಲ್ಲಿ ಬಹಳ ನಂಬರು ಪಡೆದಿದ್ದ ನಾನು ಸೀನಿಯರ್‌ಗೆ ಬರುವ ಹೊತ್ತಿಗೆ ಕೆಮಿಸ್ಟ್ರಿ ಅಧ್ಯಾಪಕರೊಂದಿಗೆ ಜಗಳವಾಡಿ ಅನೇಕ ಸಲ ಕ್ಲಾಸಿಗೆ ಚಕ್ಕರ್ ಹೊಡೆದು ಸಾಹಿತಿಗಳೊಂದಿಗೆ ಅಲೆದಾಡಿದ್ದರಿಂದ ಸೀನಿಯರ್ ಇಂಟರ್‌ನಲ್ಲಿ, ಶೇಕಡ ಒಂದು ಭಾಗ (ನನ್ನ ಪ್ರತಿಸ್ಪರ್ಧಿಗಿಂತ) ಕಡಿಮೆ ಬಂದ ಡಾಕ್ಟರ್ ವೃತ್ತಿ ನನ್ನಿಂದ ತಪ್ಪಿಸಿಕೊಂಡಿತು. ಅದು ಅಷ್ಟು ಮುಖ್ಯವಲ್ಲ ; ಅದಕ್ಕಿಂತ ಕೊಂಚ ಅರ್ಥಪೂರ್ಣವಾದದ್ದು ನಿಮ್ಮ ಸರ್ಕಾರಿ ಮೆಡಿಕಲ್ ಕಾಲೇಜು ಆಗ ಅತ್ಯುತ್ತಮ ಕಾಲೇಜೆಂದು ಹೆಸರು ಪಡೆದಿದ್ದು-ಮತ್ತು ಅಲ್ಲಿಗೆ ಹೋಗುವ ಹುಡುಗರಿಗೆ ಏಕಾಏಕಿ ಸ್ಟಾರ್ ಗುಣ ಬರುತ್ತಿದ್ದುದು. ನನಗಿನ್ನೂ ನೆನಪಿರುವಂತೆ, ನಿಮ್ಮ ಕಾಲೇಜಿನ ಉಪನ್ಯಾಸ, ಪ್ರಯೋಗಶಾಲೆ, ಅಲ್ಲಿಯ ಹುಡುಗರ ಪ್ರತಿಭೆಯ ಬಗ್ಗೆ ಖ್ಯಾತಿ ಹಬ್ಬಿತ್ತು ; ಒಮ್ಮೆ ವೈದ್ಯನಾದರೆ ಆತನ ಭವಿಷ್ಯ ಸುರಕ್ಷಿತ ಎಂಬ ಭಾವನೆ ಹರಡಿದ್ದವು ; ಜೊತೆಗೆ ನಿಮ್ಮ ಕಾಲೇಜಿನಲ್ಲಿ

---

**ಲಂಕೇಶ್‌ರವರ ಈ ಪತ್ರವು ಬೆಂಗಳೂರು ವೈದ್ಯಕೀಯ ವಿದ್ಯಾಲಯದ ಬೆಳ್ಳಿಹಬ್ಬದ ಸಂದರ್ಭಕ್ಕೆ ತಂದ ಸ್ಮರಣಸಂಚಿಕೆಯಲ್ಲಿ ಪ್ರಕಟವಾಗಿದೆ. ಇದೊಂದು ಅರ್ಥಪೂರ್ಣ ಪತ್ರ ಅನಿಸಿದ್ದರಿಂದ ಶೂದ್ರದ ಓದುಗರಿಗೆ ಕೊಡುತ್ತಿದ್ದೇವೆ. ಇದನ್ನು ಪ್ರಕಟಿಸಲು ಅನುಮತಿ ಕೊಟ್ಟ ಲಂಕೇಶ್‌ರವರಿಗೆ ಋಣಿಯಾಗಿದ್ದೇವೆ. ಸಂ.**

ಯಾವುದೇ ಅನ್ಯಾಯ, ಅನಾಚಾರದ ಸುದ್ದಿಗಳಿರಲಿಲ್ಲ. ಆಗ ನಿಜಕ್ಕೂ ರಾಜಕಾರಣ ಮತ್ತು ಶಿಕ್ಷಣ ಪ್ರತ್ಯೇಕವಾಗಿ ತಮ್ಮ ತಮ್ಮ ಕೆಲಸ ಮಾಡಿಕೊಂಡು ಹೋಗುತ್ತಿದ್ದವು.

ಇನ್ನೊಂದು ವಿಶೇಷವೆಂದರೆ, ನಾನೆಷ್ಟೇ ವೈದ್ಯಕೀಯದ ಬಗ್ಗೆ ಗೌರವ ಇಟ್ಟುಕೊಂಡಿದ್ದರೂ ನಮ್ಮ ಹೆತ್ತವರಿಗೆ ಡಾಕ್ಟರು, ಇಂಜಿನಿಯರುಗಳ ಹುದ್ದೆಗಿಂತ ತಹಸೀಲ್ದಾರರು, ಶೇಕದಾರರ ಹುದ್ದೆ ಮುಖ್ಯವಾಗಿದ್ದವು. ಅದೇಕೆಂದರೆ ಈ ಹುದ್ದೆಗಳು ಹಳ್ಳಿಗರ ಜೀವನದ ವಿವರ, ಅವಮಾನ, ಶೋಷಣೆ, ದಬ್ಬಾಳಿಕೆಯೊಂದಿಗೆ ಸೇರಿಕೊಂಡಿದ್ದವು. ನಮ್ಮ ಜನಕ್ಕೆ ರೋಗರುಜಿನಗಳು, ದೈಹಿಕ ನೋವುಗಳು, ಸಾವು ಇವೆಲ್ಲವೂ ಅಷ್ಟು ಮುಖ್ಯವಾಗದೆ ಅವರನ್ನು ಮಾನಸಿಕವಾಗಿ ಹಿಂಸಿಸುವ ಅವರ ಘನತೆಗೆ ಧಕ್ಕೆ ತರುವ ಸಂಗತಿಗಳು ಹೆಚ್ಚು ಮುಖ್ಯವಾಗುತ್ತವೆ ಎಂಬುದಕ್ಕೆ ಇದೊಂದು ಉದಾಹರಣೆ. ರೋಗ, ಸಾವುಗಳು ಪೂರ್ವ ಜನ್ಮದ ಪಾಪ, ಪುಣ್ಯಕ್ಕೆ ಸಂಬಂಧಿಸಿದಷ್ಟು ರೆವಿನ್ಯೂ ಉದ್ದೆಗಳು ಸಂಬಂಧಿಸಿಲ್ಲ. ಈ ರೆವಿನ್ಯೂ ಹುದ್ದೆಗಳು ಈ ಲೋಕದ ಈಗಿನ ಭಾಷೆ, ಕಂದಾಯ, ದರ್ಪ, ಅವಮಾನದೊಂದಿಗೆ ಈಗಲೂ ಹೊಂದಿಕೊಂಡಿವೆ.

ಕಾಲ ಬದಲಾಗಿದೆ. ಬಹುಪಾಲು ಎಲ್ಲ ರೋಗಗಳನ್ನೂ ನಿವಾರಿಸುವ ಕಲೆ ಮತ್ತು ವಿಜ್ಞಾನ ನಮ್ಮ ವೈದ್ಯಕೀಯ ಜನಕ್ಕೆ ಕರಗತವಾಗಿವೆ. ಆದರೂ ವೈದ್ಯಕೀಯ ಎಂಬುದು ವೃತ್ತಿಯೇ ಹೊರತು ನಮ್ಮ ಜನರ ಮಾನಸಿಕ ಲೋಕಕ್ಕೂ ಸಂಬಂಧಿಸಿದ ವಿಷಯವಾಗಿಲ್ಲ. ಇದಕ್ಕೆ ಹಲವಾರು ಕಾರಣಗಳಿವೆ. ಅದರಲ್ಲೊಂದು, (ನೀವು ನಗಬಹುದು), ರೋಗ ರುಜಿನಗಳು ಮತ್ತು ದೈಹಿಕ ನೋವು ಮನುಷ್ಯ ಎಲ್ಲೋ ಒಂದು ಕಡೆ ಇಷ್ಟಪಡುವ, ಇತರರಲ್ಲಿ ಅನುಕಂಪ ಹುಟ್ಟಿಸುವ ಸಾಧನ. ಅನೇಕ ಆಸ್ತಮಾ, ಹೊಟ್ಟೆ ನೋವಿನ ಜನ ನಿಜಕ್ಕೂ ಅವುಗಳನ್ನು ಗುಣಪಡಿಸಿಕೊಳ್ಳಲು ಇಷ್ಟಪಡದೆ ಇರುವುದನ್ನು ನೀವು ನೋಡಿರಬಹುದು. ಇದು ಮಾನಸಿಕ ಸಂಗತಿಯಾಯಿತು. ಎರಡನೆಯದು, ಜನರನ್ನು ಸಾವು ನೋವಿನಿಂದ ಉಳಿಸುವ ವೈದ್ಯರನ್ನೇ ನಾವು ಜನಸಂಖ್ಯೆಯ ನಿಯಂತ್ರಣಕ್ಕೆ ಹಚ್ಚುತ್ತೇವೆ. ಜನ ಕಡಿಮೆ ಇರಬೇಕು, ಅವರು ಆರೋಗ್ಯದಿಂದ ತುಂಬಿ ತುಳುಕುತ್ತಿರಬೇಕು ಎಂಬುದು ಜನರನ್ನು ಅಷ್ಟೇ ಪ್ರೀತಿಸದ ಗುಣದೊಂದಿಗೆ ಸೇರಿಕೊಂಡಿದೆ. ಮೂರನೆಯದು, ನಿಮ್ಮ ವೈದ್ಯಕೀಯ ಭಾರತದಂಥ ದೇಶದಲ್ಲಿ ಹಣವುಳ್ಳವರ, ಒಂದು ಬಗೆಯಲ್ಲಿ ಭಾಷೆ, ಜಾತಿ, ಐಶ್ವರ್ಯದ ಮೂಲಕ ಶೋಷಿಸುವವರ ವಿಶೇಷ ವಿದ್ಯೆಯೂ ಬೆಳೆದಿರುವುದರಿಂದ ಇವತ್ತಿಗೂ ಹಳ್ಳಿಯ ಜನಸಾಮಾನ್ಯರಿಗೂ ವೈದ್ಯರಿಗೂ ಅಷ್ಟು ಸಹಜ ಸ್ನೇಹ ಬೆಳೆದಿಲ್ಲ. ನಾಲ್ಕನೆಯದಾಗಿ, ನಿಮ್ಮ ವೈದ್ಯಕೀಯ ತಮ್ಮ ವಿಜ್ಞಾನದಿಂದ ಜಟಿಲವಾದಷ್ಟೂ

ಜೀವನದ ಜಟಿಲತೆಯನ್ನೂ ಅಪೇಕ್ಷಿಸುವುದರಿಂದ ಮತ್ತು ಭಾರತೀಯರ ಒಲವು ಸದಾ ಸರಳ ಬಿರುಸಿನತ್ತ ಇರುವುದರಿಂದ ಎಲ್ಲೋ ಈ ವೈದ್ಯಕೀಯ ಮಾಯ ಬಜಾರವಾಗಿಯೇ ಉಳಿದಿದೆ.

ಏನೇ ಆದರೂ ನಾನು ವೈಯಕ್ತಿಕವಾಗಿ ವೈದ್ಯಕೀಯ ಎಂಬುದು ಜನರ ಹತ್ತಿರ ಹೋಗಬೇಕು. ಮಾನವೀಯವಾಗಬೇಕು ಎಂದು ವಾದಿಸುವನು ; ಅದಕ್ಕೆ ಸಂಬಂಧಿಸಿದಂತೆ, ವೈದ್ಯಕೀಯವನ್ನು ನಮ್ಮ ಸರ್ಕಾರ ವ್ಯವಸ್ಥೆಗೊಳಿಸಬೇಕು, ಅದ ರಂಥ ಮುಖ್ಯ ವಿಷಯವನ್ನು ಖಾಸಗಿ ಭ್ರಷ್ಟರಿಗೆ ಬಿಡಬಾರದು ಎಂದು ನಂಬಿ ದವನು. ನನ್ನ ನಂಬಿಕೆಗೆ ಬೆಂಬಲ ಕೊಡುವಂತೆ ಬೆಳೆದು ಬಂದಿರುವ ನಿಮ್ಮ ವೈದ್ಯ ಕೀಯ ಕಾಲೇಜಿನ ಸೇವೆಯನ್ನು ಹೆಮ್ಮೆಯಿಂದ ನೆನೆಯುತ, ಈ ಪತ್ರ ಮುಗಿಸು ತ್ತಿದ್ದೇನೆ.

ಇತಿ,

**ಪಿ. ಲಂಕೇಶ್**

# ಲಂಕೇಶ್‌ರವರ ಉತ್ತರಗಳು

ಕೇವಲ ವಾಸ್ತವದ—ಅದರಲ್ಲೂ ಕಣ್ಣಿಗೆ ಮಾತ್ರ ಕಾಣುವ ವಾಸ್ತವದ-ಮಂಡ ನೆಯ ಬಯಕೆಯಿಂದಾಗಿ, ಈ ದಿನಗಳಲ್ಲಿ ರಚನೆಯಾಗುತ್ತಿರುವ ಸಾಹಿತ್ಯ ತನ್ನ ಸಾಧ್ಯತೆಗಳನ್ನು ಕಡಿಮೆ ಮಾಡಿಕೊಂಡಿದೆ ಎನ್ನಿಸುತ್ತದೆ. ಈ ಸ್ಥಿತಿ ಯಿಂದ ನಮ್ಮ ಲೇಖಕರು ಹೇಗೆ ಹೊರಬರಬಲ್ಲರೆಂಬುದನ್ನು ಕುರಿತು ಹೇಳುವಿರಾ ?

ತಿಕ್ಕಲುಗಳು ಬರೆಯಲು ಶುರುಮಾಡಬೇಕು. ಈ ವ್ಯವಸ್ಥೆಯಲ್ಲಿ ಒಂದು ಬಗೆಯ ಹುಚ್ಚು ಮಾತ್ರ ಸಾಕಷ್ಟು ಧೈರ್ಯ, ನಿರ್ದಾಕ್ಷಿಣ್ಯ ನೋಟ ಮತ್ತು ನಿರಾ

---

**ಕೆ. ವಿ. ನಾರಾಯಣರವರನ್ನು ಲಂಕೇಶ್‌ರವರಿಗೆ ಒಂದಷ್ಟು ಪ್ರಶ್ನೆಗಳನ್ನು ಶೂದ್ರಕ್ಕಾಗಿ ಕೇಳಿಕೊಂಡಾಗ ಕೊಟ್ಟರು. ಅವುಗಳಿಗೆ ಲಂಕೇಶ್‌ರವರು ಉತ್ತರಿಸಿದ್ದಾರೆ.**

ಡಂಬರ ದರ್ಶನ ಪಡೆಯಬಲ್ಲುದು. ಇದು ಆತ್ಮ[illegible]ಯ ಥರವೆಂದು ಗೊತ್ತಿದ್ದೂ ನೋಯುವವರು ಮಾತ್ರ ಈ [illegible]ಯ ಸಾಹಿತ್ಯ ರಚಿಸಬ[illegible].

ಕಳೆದ ಒಂದೂವರೆ ದಶಕಗಳಲ್ಲಿ ನಡೆದಿರುವ ಕೆಲವು ಬದಲಾವಣೆಗಳಿಂದಾಗಿ ಹೊಸ ಬಗೆಯ ಜೀವನ ಕ್ರಮವೊಂದಕ್ಕೆ ಮಧ್ಯಮ ಹಾಗೂ ಕೆಳಜಾತಿಯ ಜನರು ತೆರೆದುಕೊಂಡಿದ್ದಾರೆ. ಈ ಬಗೆಯ ಜೀವನಕ್ರಮ ತರುವ ಅನುಭವವನ್ನು ಒಂದು ಚೌಕಟ್ಟಿಗೆ ತೆಗೆದುಕೊಳ್ಳಲು ಬೇಕಾದ ವಿಚಾರಧಾರೆಯೊಂದು ಮಾತ್ರ ಅವರಲ್ಲಿ ಬಲವಾಗಿಲ್ಲ. ಇದರಿಂದಾಗಿ ಅವರ ಜೀವನವು ಹಲವು ಗೊಂದಲಗಳಿಂದ ತುಂಬಿದಂತಿದೆ. ಅಂತಹ ವಿಚಾರಧಾರೆಯೊಂದು ಈ ಗೊಂದಲಗಳ ನಡುವೆ ತಾನೇ ಹುಟ್ಟುವುದೋ ಅಥವಾ ಅಂಥದೊಂದನು ಅವರು ಅರಿಯುವುದು ಅವಶ್ಯವೊ ?

ಕಳೆದ ಒಂದೂವರೆ ದಶಕದಲ್ಲಿ ಏನೇನಾಗಿದೆಯೋ ಗೊತ್ತಿಲ್ಲ. ನಮ್ಮ ಜನ ಕಾಂಗ್ರೆ ಹಿಡಿತದಲ್ಲಿ ನರಳಿದ್ದು ನಿಜ. ದಲಿತರು ಗಟ್ಟಿಯಾಗಿ ಪ್ರತಾಡುತ್ತಾ ತಮ್ಮ ಹಕ್ಕುಗಳಿಗಾಗಿ ಹೋರಾಡಿದ್ದು ನಿಜ. ನಮ್ಮ ಸೋಷಲಿಸ್ಟರು ಕೊಂಚ ತರಲೆಗಳಾಗಿ ಕಂಡರೂ ನೇರವಾಗಿ, ಕ್ರೂರವಾಗಿ, ಖಾಸಗಿಯಾಗಿ ಮಾನವೀಯರಾಗಿದ್ದುದು ನಿಜ. ನಮಗೆ ಗೊತ್ತಿಲ್ಲದೆಯೇ ಬಂಡಾಯ ಸಾಹಿತ್ಯ ಅದಕ್ಕಿಂತ ಹಿಂದಿನ ಪ್ರಗತಿಶೀಲರ ಚಳವಳಿ, ತುರ್ತು ಪರಿಸ್ಥಿತಿಯ ಪಾಠಗಳು, ಹೊಸ ರೀತಿಯ ಚಲನಚಿತ್ರಗಳು—ಎಲ್ಲವೂ ನಮ್ಮ ಯುವಜನಾಂಗಕ್ಕೆ ಗತ್ತು, ಆತ್ಮಗೌರವ ತಂದಿವೆ . ಧೈರ್ಯ ತಂದಿವೆ. ಆದರೆ ನಮ್ಮ ವ್ಯವಸ್ಥೆ ಎಷ್ಟು ಭದ್ರವಾದುದೆಂದರೆ ಮಧ್ಯ ವಯಸ್ಸಿನ ಹೊತ್ತಿಗೆ ಇವೆಲ್ಲ ಗಾಳಿಯಲ್ಲಿ ತೂರಿಹೋಗುತ್ತವೆ. ಇದಕೆ ಮದ್ದಾಗಿ ಕಮ್ಯೂನಿಸ್ಟ್ ಸಿದ್ಧಾಂತ ಸೂಚಿಸೋಣವೇ ? ಸೋಷಲಿಸ್ಟ್ ಬಂಡಾಯ್ಯ ಸೂಚಿಸೋಣವೇ ? ನಮ್ಮ ಲಿಬರಲ್ ವಾತಾವರಣವೇ ಮುಕ್ತ ವಾತಾವರಣದಲ್ಲಿ ಬೆಳೆಯಲು ಬಿಡೋಣವೇ ? ನನಗೆ ಏನೂ ಹೊಳೆಯುತ್ತಿಲ್ಲ.

ಒಂದು ಮಾತ್ರ ನಿಜ. ಧರ್ಮ, ದೇವರು, ಜಗದ್ಗುರುಗಳ ಬಗ್ಗೆ ಶಾಲೆಯಲ್ಲಿ ಮಕ್ಕಳಿಗೆ ಕಲಿಸಕೂಡದು. ಪುರಾಣಗಳನ್ನು ಬೇಕಾದರೆ ಹೇಳಲಿ. ಆದರೆ ಅವನ್ನೆಲ್ಲ ಸರಿತೂಗಿಸಬಲ್ಲ ವೈಚಾರಿಕತೆ ಕಲಿಸಿ. ಎಲ್ಲ ಕ್ರಿಯಾಶೀಲತೆ ನಮ್ಮ ಕನಸ್ಸುಗಳನ್ನು ಕಂಡರಿಸಬಲ್ಲ ವೈಚಾರಿಕ ಕುಶಲತೆಯಿಂದ ಬರಬಲ್ಲುದು.

ಚಡಪಡಿಕೆ ನಿಮ್ಮಲ್ಲಿ ಬೆಳೆದಿರುವ ಪ್ರಮಾಣದಿಂದಾಗಿ ನೀವು ನಿರಂತರವಾಗಿ ಪ್ರಯೋಗಶೀಲರಾಗಿರುವುದು ಸಾಧ್ಯವಾಗಿದೆ. ಇದು ನಿಮ್ಮ ಸೃಜನಶೀಲತೆ ಪ್ರಕಟವಾಗಲು ನಡೆಸಿರುವ ಹುನ್ನಾರು ಕೂಡ ಆಗಿದೆ. ಆದರೆ ನಮ್ಮ ಸುತ್ತಲಿನ ಜಗತ್ತು ನಿಶ್ಚಿತ ಲಯಗಳ ಜೀವನವನ್ನು ಮಾತ್ರ ಮಾದರಿಯನ್ನಾಗಿ ನೀಡುತ್ತಿದೆ. ಹೀಗಿರುವಾಗ ನಿಮ್ಮ ಬಗೆ ಕಿರಿಯರಿಗೆ ಮಾದರಿಯಾಗಬಲ್ಲುದೆ ?

ಇದು ನನಗೆ ಗೊತ್ತಿಲ್ಲ. ನಿಮ್ಮ ಮೊದಲನೆ ಪ್ರಶ್ನೆಗೆ ಉತ್ತರವಾಗಬಲ್ಲ ವ್ಯಕ್ತಿಯಾಗಿದ್ದರೆ ನಾನು ತೀರಾ ಶಿಕ್ಕಲನೇ ಇರಬೇಕು. ಇದನ್ನೆ ಸಮತಾವಾದಿಗಳು ವ್ಯಕ್ತಿವೈಶಿಷ್ಟ್ಯ, ಬೂರ್ಶ್ವಾ ಇತ್ಯಾದಿಯಾಗಿ ಹೇಳುತ್ತಾರೆ. ಅಲ್ಲದೆ ನನಗೆ ಯಾವ ಶಿಸ್ತೂ ಇರಲು ಸಾಧ್ಯವಿರಲಿಲ್ಲ. ನಾನೊಬ್ಬ ಶಿಸ್ತಿನ, ದಕ್ಷವ್ಯಕ್ತಿಯೆಂದುಕೊಳ್ಳಲು ನನಗೆ ಇಷ್ಟ.

ನಮ್ಮ ಪರಿಸರವಿಡೀ ಛಿದ್ರಗೊಂಡು, ಕನಸುಗಳಿಲ್ಲದೆ, ಭ್ರಷ್ಟತೆಯನ್ನೇ ಸಹಜವೆಂದು ಭಾವಿಸುವ ಬಗೆಯಿಂದ ತುಂಬಿದೆ. ಇದಕ್ಕೆ ಕಾರಣಗಳೇನೇ ಇರಲಿ. ಇದರಿಂದ ಬಿಡುಗಡೆ ಪಡೆಯಲು ಈ ಸಮಾಜಕ್ಕೆ ಇರುವ ಹಾದಿಗಳ ಬಗೆಗೆ ನೀವು ಚಿಂತಿಸುತ್ತಿರುವವರು. ಈ ಬಗೆಗೆ ನಿಮ್ಮ ವಿಚಾರಗಳೇನು ?

ಅದೆಲ್ಲ ಸುಳ್ಳು. ನಮ್ಮ ಹುಡುಗರು ಹುಡುಗಿಯರು, ಭ್ರಷ್ಟರು ಕೂಡ ಖದೀಮರು ಕೂಡ ಭ್ರಷ್ಟತೆಯೇ ಎಲ್ಲದಕ್ಕೆ ಪರಿಹಾರವೆಂದು ತಿಳಿದಿಲ್ಲ. ಅವರಲ್ಲಿ ಆರೋಗ್ಯವಂತ ಬದುಕಿನ ಬಗ್ಗೆ ಹಂಬಲ ಹುಟ್ಟಿಸಿ ನೋಡಿ ; ಅವರು ನಿಜವಾಗಿ ಮೋಹಕ ಜೀವಿಗಳು.

ಹಲವರ ಚಟುವಟಿಕೆಗಳನ್ನು ಕೂಡಿಹಾಕುವ ಸಿನಿಮಾ ಮಾಡಿದ್ದೀರಿ. ಈಗ ಗೊತ್ತಾದ ಅವಧಿಯೊಳಗೆ ಪ್ರಕಟವಾಗಲೇಬೇಕಾಗಿರುವ ಪತ್ರಿಕೆಯೊಂದನ್ನು ನಡೆಸುತ್ತಿದ್ದೀರಿ. ನೀವು ಶಿಸ್ತಿಗೆ ಒಳಗಾಗುವ ಬಗೆಯೊಂದು ಇಲ್ಲಿ ಗೋಚರವಾಗುತ್ತಿದೆ. ಜೊತೆಗೆ ಇತರರ ಕ್ರಿಯಾಶೀಲತೆಯನ್ನೂ ಸಂಯೋಜಿಸುವ ಸಾಮರ್ಥ್ಯವನ್ನೂ ಪಡೆದಿದ್ದೀರಿ. ಈ 'ಕಟ್ಟುಪಾಡು' ಬರಹಗಾರರಾಗಿ, ಚಿಂತಕರಾಗಿ ನಿಮಗೆ ಹೇಗೆ ನೆರವಾಗಿದೆ ತಿಳಿಸುತ್ತೀರಾ ?

ನನ್ನ ಒಂದು ಶಿಸ್ತಿದೆ. ವೇಳೆಯ ಬಗ್ಗೆ, ಇನ್ನೊಬ್ಬರಿಗೆ ಕೊಡುವ ಭರವಸೆಯ ಬಗ್ಗೆ, ನನಗೆ ನಾನೇ ಹಾಕಿಕೊಳ್ಳುವ ಕಟ್ಟುಪಾಡುಗಳ ಬಗ್ಗೆ ನಾನು

ತುಂಬ ಗಂಭೀರ ಮತ್ತು ಶಿಸ್ತಿನವ. ಇದು ಎಲ್ಲ ಕ್ರಿಯಾಶೀಲತೆಗೆ ಸಹಾಯಕ ವೆಂಬುದು ನನ್ನ ಅನುಭವ.

'ಮುಸ್ಸಂಜೆ...'ಯನ್ನು ಓದಿದಾಗ ವ್ಯಕ್ತಿಯು ತನ್ನದೆಂದು ತಿಳಿಯಲಾದ ವ್ಯಕ್ತಿತ್ವಕ್ಕೆ ತಕ್ಕಂತೆ ತನ್ನ ಕ್ರಿಯೆಗಳನ್ನು ರೂಪಿಸಿಕೊಳ್ಳುವ ಬಗೆಯು ಅವನನ್ನು ಹುಸಿಯನ್ನಾಗಿ ಮಾಡುವುದೆಂದೂ, ಕ್ರಿಯೆಗಳ ಮೂಲಕವೇ ನಿಜವಾಗುವ ಬಗೆಯು ಮಾತ್ರ ಗಟ್ಟಿಯಾದುದೆಂದೂ ನೀವು ಚಿಂತಿಸಿದಂತೆ ತೋರುತ್ತದೆ. ನೀವು ಯಾವುದರ ಪರವಾಗಿ ನಿಲ್ಲುವಿರೋ ಅದು ಅಂದರೆ ಆ ಜೀವನ ಕ್ರಮ, ಒಂದು ಅತಿರೇಕದಲ್ಲಿ ಕೇಂದ್ರವೇ ಇಲ್ಲದೆ ಕೇವಲ ವರ್ತಮಾನಕ್ಕೆ ಸಿಕ್ಕಿ ಬೀಳಬಹುದೆಂದು ಅನಿಸಿಲ್ಲವೇ ?

ಆದರೆ ನನ್ನ ಕೃತಿಗಳು ನನಗೆ ನೆನಪೇ ಇರುವುದಿಲ್ಲ. ಕ್ಷಮಿಸಿ.

'ತೆರೆಗಳು' ನಾಟಕವನ್ನು ಈ ವರ್ಷ ಮತ್ತೆ ಓದಿದಾಗ ಅದರ ಅರ್ಥ ಸಾಧ್ಯತೆಗಳು ಇನ್ನೂ ವಿಸ್ತರಿಸುತ್ತಿವೆ ಎನಿಸಿತು. ತನ್ನ ಕಾಲದ ಆಚೆಗೂ ಕೈ ಚಾಚಬಲ್ಲ ನಾಟಕವೆಂಬ ಮಾಧ್ಯಮ ಮತ್ತೆ ನಿಮ್ಮನ್ನು ಈಚೆಗೆ ಕಾಡಿಲ್ಲವೆ ? ಅಥವಾ ಈ ಕಾಲ, ಸಮಾಜಗಳಿಗೆ ಅಂಥ ಅರ್ಥಸಾಧ್ಯತೆಗಳ ಪ್ರಕಾರವು ಯೋಗ್ಯವಲ್ಲವೆಂದು ತಿಳಿದಿರೊ ?

ಅದು ನಿಜವಲ್ಲ. "ಮುಸ್ಸಂಜೆ" ಕ್ರಿಯೆಯನ್ನು ಮಂಡಿಸಿದರೂ ಅನೇಕ ಕೆಟ್ಟ, ಒಳ್ಳೆಯ ಯೋಚನೆ, Motive ಗಳ ಪುಸ್ತಕ. ಅದು ತೀರಾ ಅತಿಯಾಗಿದೆ. ನನಗೀಗ ಅದೆಲ್ಲ ಇಷ್ಟವಾಗುತ್ತಿಲ್ಲ. ನಿಜಕ್ಕೂ ಇಷ್ಟವಾಗುವ ಪುಸ್ತಕವನ್ನು ಬರೆಯಬೇಕಾಗಿದೆ. ವೇಳೆಯಿಲ್ಲ, ಅದಿಲ್ಲ, ಇದಿಲ್ಲ ಎಂದು ಹೇಳಲಾರೆ. ನಾನು ಈಗಲೂ ತುಂಬ ವೇಳೆಯುಳ್ಳ ಮಹಾ ಸೋಮಾರಿ ; ಯಾಕೆಂದರೆ ಕಾಲದ ಬಗ್ಗೆ ನಾನು ಲೆಕ್ಕಾಚಾರದ ಮನುಷ್ಯ.

ಮಧ್ಯವಯಸ್ಸಿನ ಗಡಿಗಳಲ್ಲಿರುವ ನಿಮ್ಮಲ್ಲಿ ಜೀವನವನ್ನು ಗ್ರಹಿಸುವ ಕ್ರಮದಲ್ಲಿ ವಯಸ್ಸಿನಿಂದಾಗಿಯೇ ಏನಾದರೂ ಬದಲಾವಣೆಗಳಾಗಿರುವುದು ಗಮನಕ್ಕೆ ಬರುತ್ತಿದೆಯೋ ? ಹಾಗೂ ಇದು ನಿಮ್ಮ ಬರವಣಿಗೆಯಲ್ಲಿ ಹೊಸ ಆಕಾರಗಳನ್ನು ಪಡೆಯಲು ಹವಣಿಸುತ್ತಿದೆಯೋ ?

ನಾನು ಹುಡುಗನಲ್ಲ. ತರುಣ ಸಾಹಿತಿ ಅಥವಾ ಪತ್ರಕರ್ತನಲ್ಲ ಎಂದು ಯೋಚಿಸಲೂ ನನಗೆ ಹಿಂಜರಿಕೆಯಾಗುತ್ತದೆ. ತಾರುಣ್ಯ ಮತ್ತು ತಾರುಣ್ಯದ ಉಬ್ಬು, ನಿರ್ಲಕ್ಷ್ಯ, ಸಂತೋಷವೇ ಇಲ್ಲದ ಯಾವ ಮುದುಕನೂ ಕ್ರಿಯಾಶೀಲನಾಗಿ ಉಳಿಯಲಾರ. ಇದೆಲ್ಲ ವಾದವಾಯಿತು. ಈಗ ನಾನು ಕೊಂಚ ನಿಧಾನವಾಗಿ ಯೋಚಿಸುವುದನ್ನು, ನಿಧಾನವಾಗಿ ಗ್ರಹಿಸುವುದನ್ನು, ಬಿರುಸಿದ್ದಲ್ಲದರ ಅರ್ಥವನ್ನು ಆಹ್ವಾನಿಸುವುದನ್ನು, ಈ ಆಹ್ವಾನದ ನಿರರ್ಥಕತೆಯನ್ನು ಕಲಿತಿದ್ದೇನೆ. ಅದನ್ನೂ ದೃಢವಾಗಿ ಹೇಳಲಾದ ಭೀತಿ ಮತ್ತು ಸಂಕೋಚಗಳು ಅಷ್ಟೇ ತೀವ್ರವಾಗಿ ಬೆಳೆಯುತ್ತಿವೆ. ವಯಸ್ಸಾಗುತ್ತ ನನಗಾಗುತ್ತಿರುವ ಅನುಮಾನಗಳ ಬಗ್ಗೆ ಕೆಲವೊಮ್ಮೆ ನಗೆ ಬರುತ್ತದೆ. ಇದೇ ಒಂದು ಬಗೆಯ ಮುಕ್ತ ಪ್ರೀತಿಗೆ ದಾರಿಯಾಗಬಲ್ಲದೆ ? ಅಥವಾ ಮುಕ್ತ ಸ್ವೇಚ್ಛೆಗೆ ?

ಮಹತ್ವದ ಸೃಜನಶೀಲ ಲೇಖಕರ ತಲೆಮಾರಿಗೆ ನೀವು ಸೇರಿದ್ದೀರಿ. ಅಲ್ಲಲ್ಲಿ ಒಬ್ಬೊಬ್ಬ ಸಮರ್ಥ ಲೇಖಕರನ್ನು ಬಿಟ್ಟರೆ ಇನ್ನೊಂದು ತಲೆಮಾರು ರೂಪುಗೊಂಡಿಲ್ಲ ಇದಕ್ಕೆ ಕಾರಣಗಳೇನಿರಬಹುದು ?

ಮೊದಲನೆಯ ಮಾತು ಕೇವಲ ಹೊಗಳಿಕೆ. ನಾನು ತುಂಬ ಕಾಲವನ್ನು ಜೀವಿಸುವುದಕ್ಕೆ ಕಳೆದುಬಿಟ್ಟಿದ್ದೇನೆ.

ಈಗಿನ ಹುಡುಗರ ತೊಂದರೆಗಳ ಬಗ್ಗೆ ನಾನೇನು ಹೇಳಬಲ್ಲೆ ? ಪಾಪ, ತಮ್ಮ ತೊಂದರೆಗಳನ್ನು ನೋಡಿಕೊಂಡು ಎಲ್ಲರಿಗೆ ಹೇಳುವಂಥ ಸುಖ, ವಸ್ತುನಿಷ್ಠೆ ಅವರಿಗೆ ದೊರೆಯಲಿ.

ನನಗೆ ಇವರ ಬಗ್ಗೆ ಅಸೂಯೆಯಾಗುವಂತಾಗಲಿ ಮುಪ್ಪಿನ ಕಡೆಗೆ ಸಾಗುತ್ತಿರುವವರಲ್ಲಿ ಹೊಟ್ಟೆಕಿಚ್ಚು ಹುಟ್ಟಿಸಲಾಗದ ಜನಾಂಗ ಎಂಥ ಜುಜುಬಿ, ಅಲ್ಲವೇ ?



# ಕನಸಿಗೊಂದು ಕಣ್ಣು

## ಸಂಸ್ಕೃತಿಯೊಳಗಿನ ಕೆಲವು ಆಕಸ್ಮಿಕಗಳು

ಖಾಸಗಿ ಪತ್ರದ ಚೌಕಟ್ಟಿನಲ್ಲಿ ಸಂಸ್ಕೃತಿಯ ಬಗ್ಗೆ ಪ್ರಬಂಧ ಬರೆದು ನನ್ನೆಲ್ಲ ಗೊಂದಲಗಳನ್ನು ತೋಡಿಕೊಳ್ಳಲು ಬಯಸುವುದಿಲ್ಲ. ಯಾಕೆಂದರೆ 'ಸಂಸ್ಕೃತಿ' ಎನ್ನುವ ಶಬ್ದ ಎಷ್ಟು ಪ್ರಿಯವೋ ಅಷ್ಟೇ ಅರ್ಥವಾಗದ ವಿಷಯವೂ ಆಗಿರುವುದರಿಂದ ಅದರ ಎಲ್ಲಾ ಗೂಢಾರ್ಥಗಳನ್ನು ಮಾರ್ಮಿಕವಾಗಿಯೇ ಗ್ರಹಿಸಿಕೊಳ್ಳುವುದು ಸೂಕ್ತ ಎಂದುಕೊಂಡು ತುಂಬ ಖಾಸಗಿಯಾದ ಬದುಕು ಹೇಗೆ ಹೇಳಿಕೊಳ್ಳುವ ಮತ್ತು ಹೇಳಿಕೊಳ್ಳಲಾರದ ಮಾನಸಿಕ ಪ್ರಕ್ರಿಯೆಯಲ್ಲಿಯೇ ನರಳುತ್ತಿರುತ್ತೆ ಎಂಬುದನ್ನು ಪ್ರತಿಯೊಬ್ಬರೂ ಅನುಭವಿಸುತ್ತಿರುತ್ತಾರೆ. ಯಾಕೆಂದರೆ ಪ್ರತಿಯೊಬ್ಬರ ಖಾಸಗಿ ಸಂಬಂಧಗಳು ಹೆಚ್ಚು ನಿಗೂಢವಾಗಿಯೇ ಇರುತ್ತದೆ ಎಂದುಕೊಂಡಿದ್ದೇನೆ. ಯಾರೂ ನೀಲಾಕಾಶದಲ್ಲಿ ಸಂಚರಿಸುವ ಚಂದ್ರನಂತೆ ಪರಿಶುದ್ಧವಾಗಿ ಗೋಚರಿಸುವುದಿಲ್ಲ. ಚಂದ್ರನಿಗೂ ಅವಸ್ಥೆಗಳಿರುವುದರಿಂದ ಅವನೂ (ಅದೂ ಆಗಿದೆಯಲ್ಲವೇ ?) ಸಹ ನಮ್ಮ ಸೂಕ್ಷ್ಮ ಮನಸ್ಸಿಗೆ ದಕ್ಕದವನು ಎನ್ನುವುದು ಅಗೋಚರ ಸತ್ಯವೇನೂ ಅಲ್ಲ.

ಒಂದು ದೇಶದ ಸಂಸ್ಕೃತಿಯೊಳಗೆ ಏನೇನು ಸೇರುತ್ತೆ–ಏನೇನು ಸೇರುವುದಿಲ್ಲ ಎನ್ನುವುದನ್ನು ಹೇಳುವುದು ಕಷ್ಟ. ಹಾಗೆಯೇ ಸೇರಿದ ಮೇಲೆ ಅದು ಜೀರ್ಣ ರೂಪದಲ್ಲಿ ನೆಲೆಗೊಳ್ಳುವ ಕ್ರಮದ ಮೇಲೂ ಅದರ ಅಸ್ತಿತ್ವದ ಪೂರ್ಣಸ್ವರೂಪವನ್ನರಿಯಬಹುದು. ಇವುಗಳಲ್ಲಿ ನಮ್ಮ ದೇವರು-ದಿಂಡಿರಾಗಿರಬಹುದು. ಅಥವಾ ಚರಿತ್ರೆಯ ಮಹಾನ್‌ನಾಯಕರಿಂದ ಮೊದಲುಗೊಂಡು ಇಂದಿನ ಪುಡಾರಿಗಳ ತನಕ ಸೇರ್ಪಡೆಯಾಗಬಹುದು. 'ಪುಡಾರಿ' ಶಬ್ದವೂ ನಮ್ಮ ಸಂಸ್ಕೃತಿಯ ಸಂದರ್ಭದಲ್ಲಿ

ಇಲ್ಲವೇ ರಾಜಕೀಯ ಸಂದರ್ಭದಲ್ಲಿ ಹೆಚ್ಚು ಜನಬಳಕೆಯಾದ ಶಬ್ದ. ಇಂಥ ಜನ ಬಳಕೆಯ ಚೌಕಟ್ಟಿನಲ್ಲಿ ನಾನಾ ರೀತಿಯ ವೈಪರೀತ್ಯಗಳನ್ನು ನೋಡುತ್ತ ಹೋಗು ತ್ತೇವೆ. ಈ ದೃಷ್ಟಿಯಿಂದ ಕೆಲವು ವರ್ಷಗಳಿಂದ ಖಾಸಗಿಯಾಗಿ ಹೆಚ್ಚು ಹೆಚ್ಚು ತಲೆಕೆಡಿಸಿಕೊಂಡಿರುವುದು ಅಯ್ಯಪ್ಪನ ಭಕ್ತರ ಚಟುವಟಿಕೆಯ ಬಗ್ಗೆ, ಅಯ್ಯಪ್ಪ ಚಳಿಗಾಲದ ಸೀಸನಲ್ ಸ್ವಾಮಿ.

ಈ ಕೇರಳದ ಸೀಸನಲ್ ಸ್ವಾಮಿ ಹೇಗೆ ಹುಟ್ಟಿದ ಎಂಬುದರ ಬಗ್ಗೆ ನಾನಾ ಕತೆಗಳಿರಬಹುದು. ಆದರೆ ಒಂದು ಸ್ವಾರಸ್ಯಕರವಾದ ಸಂಗತಿಯೆಂದರೆ ; ನಮ್ಮ ಪುರಾಣಗಳ ಇಬ್ಬರು ಮೇಜರ್ ದೇವರುಗಳು ಏಕಕಾಲದಲ್ಲಿ ಒಬ್ಬಳೇ ಮೋಹ ನಾಂಗಿಗೆ ಪರದಾಡಿದ್ದು. ಇಪ್ಪತ್ತನೆಯ ಶತಮಾನದ ಭಾಷೆಯಲ್ಲಿ ಹೇಳಬೇಕೆಂದರೆ ರೇಪ್ ಮಾಡಲು ತೊಡಗಿದ್ದು. ಕೊನೆಗೆ ಆ ರೇಪ್‌ನ ಫಲಸ್ವರೂಪವಾಗಿ ಯಾರ ವೀರ್ಯವು ಆ ಮೋಹನಾಂಗಿಯ ಕೈಮೇಲೆ ಬಿತ್ತು ಎನ್ನುವುದಕ್ಕಿಂತ. ಆ ಮೋಹನಾಂಗಿಯ ಕೈಯಿಂದ 'ಕೈಯಪ್ಪ' ಹುಟ್ಟಿದ, ಕೊನೆಗೆ 'ಅಯ್ಯಪ್ಪ' ಆದ ಎನ್ನುವುದು ಪ್ರತೀತಿ. ಅದೇನೇ ಇರಲಿ, ಈತ ಅಸಂಖ್ಯ ಭಕ್ತರನ್ನು ಸೃಷ್ಟಿಸಿದ. ಈ ಭಕ್ತರ ಯೂನೀ ಫಾರಂ ಅಂತೂ ನಮ್ಮ ಸಂಸ್ಕೃತಿಯ ಬ್ಲಾಕ್‌ಸ್ಪಾಟ್ ಎಂಬುದರಲ್ಲಿ ಸಂಶಯವಿಲ್ಲ. ಇವರು ಸೃಷ್ಟಿಸುವುದು ಏನನ್ನು ? ಅಯ್ಯಪ್ಪನ ಯಾವ ತತ್ವಜ್ಞಾನಕ್ಕಾಗಿ ಮಾರು ಹೋದರು ಎಂಬುದು ಗೊತ್ತಾಗುವುದಿಲ್ಲ. ಯಾಕೆಂದರೆ ಅಯ್ಯಪ್ಪ ನಮ್ಮ ಸಂಸ್ಕೃ ತಿಯ ಕೊಡುಗೆಯಾಗಿ ಬಂದಿದ್ದಾನೆಯೇ ಎಂಬುದು ನನ್ನನ್ನು ಸದಾ ಕಾಡುತ್ತಿರುವ ಪ್ರಶ್ನೆ. ಈ ಪ್ರಶ್ನೆಯ ಚೌಕಟ್ಟಿನಲ್ಲಿ ನಾನಾ ಉಪಪ್ರಶ್ನೆಗಳು ಇವೆ. ಅದರಲ್ಲಿ ಮುಖ್ಯವಾಗಿ ಅಯ್ಯಪ್ಪನ ನಲವತ್ತು ದಿನಗಳ ಆರಾಧನೆಯ ಸಮಯದಲ್ಲಿ ಅಯ್ಯ ಪ್ಪನ ಭಕ್ತರು ನಮ್ಮ ಸಂಸ್ಕೃತಿಯ ಶ್ರೀಮಂತ ಭಾಗವಾದ ಹೆಣ್ಣಿನಿಂದ ದೂರ ಉಳಿಯುವುದು. ಇದರ ಹಿಂದೆ ಮುಂದಿನ ಸ್ವಾರಸ್ಯಗಳು ಏನೇ ಇರಲಿ ; ಇರ ಬಹುದೇನೋ ಎಂದು ಬಹಳ ವರ್ಷಗಳಿಂದ ನಂಬಿದವನು. ಆದರೆ ಈ ನಂಬಿಕೆ ಸುಳ್ಳಾದಾಗ ಆಶ್ಚರ್ಯಗೊಂಡೆ. ಇದಕ್ಕೆ ಕಾರಣವಾದ ಬಡತನ-ಶೋಷಣೆ, ಮೋಸ ವಂಚನೆ ಎಲ್ಲವೂ ಒಂದಕ್ಕೊಂದು ಪೂರಕವಾಗಿದೆಯೋ ? ಅಥವಾ ಮನುಷ್ಯ ತನ್ನ ಪಾಪಪ್ರಜ್ಞೆಯಿಂದ ಪರಕೀಯನಾಗಲು ಇಂಥದ್ದಕ್ಕೆಲ್ಲ ಮೊರೆಹೋಗುತ್ತಾನಾ ? ಕೊನೆಗೆ ದೇವರು ಧರ್ಮ ಕೂಡ ಪರಕೀಯತೆಯನ್ನನುಭವಿಸಲು ಇರುವ ವಿಶ್ರಾಂತ ಧಾಮಗಳೇ ಅನ್ನಿಸಿದೆ.

ನವೆಂಬರ್ 20ರ ರಾತ್ರಿ ಹತ್ತೂವರೆಯಾಗಿತ್ತು. ಬೆಂಗಳೂರಿನ ರಾಕ್ಷಸ ಬಯಲಿನಲ್ಲಿಯ ಸಾಕಷ್ಟು ಗದ್ದಲ ಕಡಿಮೆಯಾಗಿತ್ತು, (ಎಲ್ಲಾ ಭಾಗಗಳಲ್ಲಿಯೂ

ಅಲ್ಲ) ನಾನಿದ್ದ ಲಾಲ್‌ಬಾಗಿನ ಮುಂಭಾಗದ ಮಹಾದ್ವಾರದ ಬಳಿಯ ಬಸ್ ಸಿಲ್ದಾಣದಲ್ಲಿ. ದಿನವಿಡೀ ಜನ ಅಲ್ಲಿಯೇ ಉಚ್ಚೆ ಬಿಟ್ಟಿದ್ದರಿಂದ ಅದರ ವಾಸನೆ ಅಸಹ್ಯಕರವಾಗಿತ್ತು. ಅಲ್ಲಿ ನಿಲ್ಲುವ ನೂರಾರು ಜನ ದಿನನಿತ್ಯ ಎದುರು ಇರುವ ಲಾಲ್‌ಬಾಗಿನ ಸೌಂದರ್ಯವನ್ನು ನೋಡಿಕೊಂಡೋ ಅಥವಾ ತಮ್ಮ ಅಂತರಂಗದ ಗದ್ದಲದಲ್ಲಿ ಯಾವುದರ ಪರಿವೆಯೂ ಇಲ್ಲದೆ ಎಲ್ಲಾ ಹಿಂಸೆಯನ್ನು ನುಂಗಿಕೊಳ್ಳುವ ಜೀರ್ಣೋದ್ಧಾರಕರಾಗಿಯೋ ಇದನ್ನು ಸಹಿಸಿಕೊಂಡಿರುತ್ತಾರೆ. ಅದೇನೆ ಇರಲಿ ಬಸ್ಸು ಬರುವುದು ಗ್ಯಾರಂಟಿಯಿಲ್ಲವೆಂದುಕೊಂಡು, ಅಲ್ಲಿಯೇ ಪರಿಚಯವಾದ ರಾಮಕೃಷ್ಣನೆಂಬ ಗೆಳೆಯನೊಡನೆ ಲಕ್ಕಸಂದ್ರದವರೆವಿಗೆ ನಡೆದು ಅಲ್ಲಿಂದ ಮೆಜೆಸ್ಟಿಕ್‌ನಿಂದ ಬರುವ ಕೊನೆಯ ಬಸ್ಸಿಗೆ ಹೋಗುವ ಎಂದುಕೊಂಡು ನಡೆದೆವು.

ಜೋಡಿರಸ್ತೆಯನ್ನು ದಾಟಿದೆವು. ಅದರ ಪಕ್ಕದಲ್ಲಿಯೇ ಇದ್ದ ವಿದ್ಯುತ್ ಶವಾಗಾರ ನೂರಾರು ಜನರ ಕಣ್ಣೀರಿನ ಮುಂದೆ, ಅವರ ಕಣ್ಣೀರಿನ ಪ್ರತೀಕಗಳನ್ನು ಸುಟ್ಟು ಅವರ ಕೈಗೆ ಬದುಕಿನುದ್ದಕ್ಕೂ ನಲಿದಾಡುತ್ತಲೋ, ನವೆಯುತ್ತಲೋ ಕಳೆದ ಸುಂದರ ದೇಹಗಳ ಬೂದಿಯನ್ನು ಕೊಟ್ಟು ಸುಸ್ತಾಗಿ ಮಲಗಿದಂತಿತ್ತು.

ವಿದ್ಯುತ್ ಶವಾಗಾರದಿಂದ ಸ್ವಲ್ಪ ಮುಂದೆ ಹೋದೆವು. ನಾಲ್ಕೈದು ಮಂದಿ ಹೆಂಗಸರು ಓಡಾಡುತ್ತಿದ್ದರು. ನಮ್ಮ ಎದುರಿನಲ್ಲಿಯೇ ಹೆಂಗಸೊಬ್ಬಳು ಬಿಕ್ಕಿಬಿಕ್ಕಿ ಅಳುತ್ತ ಹಾದುಹೋದಳು. ಒಂದು ಕ್ಷಣ ಆಕೆಯನ್ನು ನಿಲ್ಲಿಸಿ ಮಾತಾಡುವ ಅನ್ನಿಸಿತು. ಆದರೆ...ಎಂಬ ಭಯದಿಂದ ಒಂದು ಕ್ಷಣ ತಡೆದೆವು. ಆದರೂ ಧೈರ್ಯ ಮಾಡಿ ಮುಂದೆ ಹೋಗಿದ್ದ ಆಕೆಯನ್ನು ತಡೆದು ಕೇಳಿದಾಗ ಆಕೆ ಅಳುತ್ತ "ನಿಮಗ್ಯಾಕೆ ಸುಮ್ಮನೆ ಹೋಗಿ" ಎಂದಳು. ಆಕೆಯ ಮುಖವನ್ನು ನೋಡಿದೆ. ಒಂದ್ಹ ಕ್ಷಣ ಹಿಂದೆ ಸರಿಯುವಂತಾಯಿತು, ಮುಖದ ಒಂದು ಭಾಗ ಸುಟ್ಟುಹೋಗಿತ್ತು. ಮುಂದಿನ ನಮ್ಮ ಮಾತಿಗೆ ಕಾಯದೆ ಆಕೆ ನಡೆದಳು. ಆ ಪ್ರಶಾಂತ ರಾತ್ರಿಯಲ್ಲಿ, ರಾಷ್ಟ್ರೀಯ ಹೆದ್ದಾರಿಯಲ್ಲಿ ಸಾಗುತ್ತಿದ್ದ ವಾಹನಗಳ ಶಬ್ದದಲ್ಲಿ ಆಕೆ ಕರಗಿ ಹೋದಳ.

ನಾವು ವಾಪಸ್ಸು ಬಂದೆವು. ಮತ್ತೆ ಅದೇ ವಿದ್ಯುತ್ ಶವಾಗಾರದ ಪಕ್ಕದ ರಸ್ತೆಯಲ್ಲಿ ಒಂದು ಕಾಕಾ ಹೋಟೆಲ್. ಹೊರಗೆ ಒಬ್ಬ ಅಯ್ಯಪ್ಪ ಭಕ್ತ ನಿಂತಿದ್ದ. ಕುತೂಹಲದಿಂದ ಒಂದು ಕ್ಷಣ ನಿಂತು, ನನ್ನ ಜೊತೆಯಲ್ಲಿದ್ದ ರಾಮಕೃಷ್ಣನೊಡನೆ ಅವನನ್ನು ಮಾತಾಡಿಸಿ ಬರೋಣ ಬನ್ನಿ ಎಂದೆ. ಅಷ್ಟರಲ್ಲಿ ಅವನಿಗೆ ನನ್ನ ನಡವಳಿಕೆ ಬೇಸರವಾಗಿತ್ತು ಎಂದು ಕಾಣುತ್ತೆ. "ನನಗೆ ಸಮಯವಾಯಿತು ಹೋಗ್ತೀನಿ

ಎಂಬ. ದಯವಿಟ್ಟು ಇರಿ ಎಂದು ಅಯ್ಯಪ್ಪನ ಭಕ್ತನ ಹತ್ತಿರ ಹೋದೆ. ಆಗ ತಾನೇ ಸ್ನಾನ ಮಾಡಿದಂತಿದ್ದ. ಕಪ್ಪು ಬಣ್ಣ ಬಟ್ಟೆ ನೀಟಾಗಿ ಕಂಡುವು. ಹಣೆಯಲ್ಲಿನ ವಿಭೂತಿ, ಅದರ ಮಧ್ಯೆಯ ಕುಂಕುಮದ ಬೊಟ್ಟು ಇವನೊಬ್ಬ ಮಹಾಭಕ್ತ ಎಂದು ಹೇಳುವಂತಿತ್ತು.

ನಾನು ಅವನ ಬಳಿಗೆ ಹೋದಾಕ್ಷಣ, ನನಗೆ ಮಾತಾಡುವ ಅವಕಾಶ ಕೊಡದೆ, "ಇಲ್ಲೇ ಮಾಡ್ತೀರ ಅಥವಾ ರೂಮ್ ಮಾಡ್ತೀರಾ ?" ಎಂದ. ಒಂದು ಕ್ಷಣ ಅವನ ಮುಖವನ್ನೇ ದಿಟ್ಟಿಸಿದೆ. ಅಲ್ಲೂ ಅವನ ಮುಖದ ಗೆರೆಗಳಲ್ಲಿ ಅಯ್ಯಪ್ಪ ಸಂಚರಿಸುತ್ತಿದ್ದುದು ಗೋಚರಿಸಲಿಲ್ಲ. "ಎಷ್ಟು ?" ಎಂದೆ. "ಹನ್ನೆರಡು ರೂಪಾಯಿ, ಐವತ್ತು ರೂಪಾಯಿ" ಎಂದ. ನಾನು ಗಂಭೀರವಾಗಿಯೇ "ನೀವು ಅಯ್ಯಪ್ಪನ ಭಕ್ತರು ಹೆಣ್ಣಿನ ಸಹವಾಸ ಮಾಡಕೂಡದು ಅಲ್ಲವಾ ?" ಎಂದೆ. ಅವನ ದೃಷ್ಟಿ ತೀವ್ರವಾಗತೊಡಗಿತು. "ಹೊಟ್ಟೆ ಪಾಡು ಏನ್ ಮಾಡೋದು...ಹೋಗ್ತೀರೇನ್ರಿ ?" ಎಂದ. "ಇಲ್ಲ" ಎಂದು ಅವನ ಪ್ರತಿಕ್ರಿಯೆಗೂ ಕಾಯದೆ, ರಾಮಕೃಷ್ಣನ ಹತ್ತಿರ ಬಂದೆ. ನಾಲ್ಕೈದು ಜನ ಗಂಡಸರು ಕತ್ತಲಿನ ಭೀಕರ ಕೂಪದಿಂದ ಹೊರಗೆ ಬರುತ್ತಿರುವಂತೆ ಗೋಚರಿಸಿತು.

ಲಕ್ಕಸಂಪ್ರದ ಬಳಿಯೂ ಬಸ್ಸು ಸಿಗಲಿಲ್ಲ. ಮನೆ ತಲುಪಿದಾಗ ರಾತ್ರಿ ಹನ್ನೆರಡುವರೆಯಾಗಿತ್ತು. ನಿದ್ದೆ ನನ್ನನ್ನು ಆಲಂಗಿಸಿಕೊಳ್ಳಲು ಬರಲೇ ಇಲ್ಲ. ರಾತ್ರಿಯಲ್ಲಿ ಲೈಂಗಿಕತೆಯ ವಿಶ್ವರೂಪ ಮತ್ತು ಬಡತನವನ್ನು ಕುರಿತು ಯೋಚಿಸಿದಂತೆಲ್ಲ ತಲೆ ಸಿಡಿಯತೊಡಗಿತು. ಈ ಉದ್ಯಾನ ನಗರದಲ್ಲಿ ಅವಿತುಕೊಂಡು ನರಳುತ್ತಿರುವ ಸುಮಾರು ನಲವತ್ತು ಸಾವಿರ ವೇಶ್ಯೆಯರ ಪಾಡು ನೆನಪಿಗೆ ಬಂತು. ಬಿಸಿ ಬಿಸಿ ಕಪ್ಪು ಕಾಫಿಯನ್ನ ಮಾಡಿಕೊಂಡು ಕುಡಿಯತೊಡಗಿದೆ ಹಾಯ್ ಅನ್ನಿಸಿತು. ನನ್ನ ಮಗಳು ಕ್ರಿಯಾ ದೀಪದ ಬೆಳಕಿಗೆ ಎಚ್ಚತ್ತು ಎದ್ದು ಬಂದಳು. "ಅಣ್ಣಾ" ಎನ್ನುವ ಮಾತಿನ ನಂತರ ತೊಡೆಯ ಮೇಲೆ ಕೂತು ನಿದ್ದೆಯಲ್ಲಿ ಕರಗಿಹೋದಳು.

ಎಲ್ಲವನ್ನು ಯೋಚಿಸಿದಂತೆಲ್ಲ ; ಈ ಭಾವುಕ ಜೀವನದಿಂದ ಪರಾರಿಯಾಗ ಬೇಕೆಂದುಕೊಂಡು ಬೆಳಕನ್ನು ಕಂಡೆ. ಸ್ನಾನ ಮಾಡಿ ಗೆಳೆಯನ ಮನೆಗೆ ಹೋದೆ. ಒಂದೆರಡು ಗಂಟೆಯ ಮಟ್ಟಿಗೆ ಕ್ಯಾಮರಾ ಕೇಳಿದೆ. (ನನ್ನ ಕ್ಯಾಮರಾವನ್ನು ಮಾರಿಕೊಂಡಿದ್ದೆ.) ಕೊಟ್ಟ. ರಾತ್ರಿ ನೋಡಿದ ಜಾಗದ ಹತ್ತಿರ ಕ್ಯಾಮರಾದ ಕಣ್ಣು ತೆರೆದೆ. ಅಸಹ್ಯವಾದ ಜಾಗ. ನನ್ನ ಊಹೆಗೆ ಮೀರಿ ಅಸಹ್ಯವಾಗಿತ್ತು.

ಲೆಕ್ಕಕ್ಕೆ ಸಿಗದಷ್ಟು ಮಂದಿ ಕಕ್ಕಸ್ಸಿಗೆ ಕೂತಿದ್ದರು. ಬೇಸರದಿಂದ, ಕತ್ತಲಿನಲ್ಲಿ ಇಲ್ಲಿ ನಡೆಯುವ ಲೈಂಗಿಕ ಸಂಬಂಧಗಳನ್ನು ನೆನಪು ಮಾಡಿಕೊಂಡೆ.

ಹಿಂದಿರುಗಿ ನೋಡಿದಾಗ ವಿಶಾಲವಾದ ಸ್ಮಶಾನ. ಸಾವಿರಾರು ಗೋರಿಗಳ ಮೇಲೆ ತಲೆಯೆತ್ತಿ ಕೂತಂತೆ ಕಲ್ಲುಗಳು. ಕ್ಯಾಮರಾ ಕಣ್ಣು ತೆರೆಯಿತು. ಅಲ್ಲಲ್ಲಿ ಆ ಗೋರಿಗಳಿಗೆ ಪೂಜೆ ಸಲ್ಲಿಸಿ ವ್ಯಥೆಯಿಂದ ಸಾಗುತ್ತಿದ್ದ ಜನ. ಯಾರ ಭಕ್ತರಾಗಿದ್ದರೋ ತಿಳಿಯಲಿಲ್ಲ. ಆದರೆ ಅಯ್ಯಪ್ಪನ ಭಕ್ತರಾಗಿರಲಿಲ್ಲ. ಯಾಕೆಂದರೆ ಅವರು ಕಪ್ಪು ಬಟ್ಟೆಯನ್ನು ಧರಿಸಿರಲಿಲ್ಲ.

ದಯವಿಟ್ಟು ಕ್ಷಮಿಸಿ, ನನ್ನ ಖಾಸಗಿ ಪತ್ರ ಹೆಚ್ಚು ಖಾಸಗಿಯಾಗಿದ್ದರೆ.

ಖಾಸಗಿ ಪತ್ರದ ಪುಟ್ಟಭಾಗ

ಡಿಸೆಂಬರ್, 10 ರಂದು ಬೆಳಗ್ಗೆ 8-15ಕ್ಕೆ ಕ್ಲಾಸಿತ್ತು. ಬಸ್ಸು ಸಿಗಲಿಲ್ಲ. ಮನೆಯಿಂದ ಎರಡು ಕಿ. ಮೀ. ದೂರದಲ್ಲಿರುವ ಹುಚ್ಚಾಸ್ಪತ್ರೆಯವರೆಗೆ ನಡೆದು ಬಂದೆ. ಆಟೋ ಕಾಣಿಸಿತು. ಕರೆದೆ. ಬಂದ.

ಲಾಲ್‌ಬಾಗಿನ ಪ್ರಮುಖ ದ್ವಾರದ ಬಳಿಗೆ ಬಂದಾಗ ಒಂದಷ್ಟು ಮಂದಿ ಓಡಿಬಂದರು. ಅವರ ಕೈಯಲ್ಲಿ ಕಲ್ಲುಗಳು ಇದ್ದುವು. ಒಬ್ಬನು ಬೈಯ್ಯಲು ತೊಡಗಿದ ಆಟೋ ಚಾಲಕನನ್ನು. ಮತ್ತೊಬ್ಬನು ಚಕ್ರದಲ್ಲಿಯ ಗಾಳಿಯನ್ನು ಬಿಡಲು ಹೋದ. ಆಗ ಆಟೋಚಾಲಕ ದಯವಿಟ್ಟು ಕ್ಷಮಿಸಿ. ವೆಸ್ಟ್‌ಗೇಟಿನಲ್ಲಿ ಯಾರೋ ಸತ್ತೋಗಿದ್ದಾರೆ ಎಂದ. ಎಲ್ಲರೂ ನನ್ನ ಕಡೆ ನೋಡಿದರು. ಆಟೋಚಾಲಕ ನನ್ನತ್ತ ದೈನ್ಯತೆಯಿಂದ ನೋಡಿದ. ನಾನು "ಹೌದು" ಎಂದೆ. ಬಂದವರೆಲ್ಲ ಹಿಂದೆ ಸರಿಯುತ್ತ "ಮುಂದೆ ಹೋಗು ಮಾವಳ್ಳಿಯ ಹತ್ತಿರ ಎಕ್ತಾರೆ" ಎಂದರು. ಆಟೋ ಚಾಲಕನಿಗೆ ಮುಂದೆ ಹೋಗಲು ಧೈರ್ಯ ಬರಲಿಲ್ಲ. ನಾನು ಅಲ್ಲಿಯೇ ಇಳಿತೀನಿ ಎಂದರೂ ; "ಸುಮ್ಮನೆ ಇರ್ರಿ ಸಾರ್, ನನ್ಮಕ್ಕಳು ಮತ್ತೆ ಬಂದ್ಬಿಡ್ತಾರೆ." ಎಂದು ಜೋರಾಗಿ ಓಡಿಸುತ್ತ ಡಬಲ್ ರೋಡಿನ ಬಳಿ ಬಿಟ್ಟ. ದುಡ್ಡು ಕೊಡುತ್ತ "ಒಳ್ಳೆ ಶಿಕ್ಷೆ ಕೊಟ್ಟೆ. ಅಲ್ಲಯ್ಯ, ಅವರೆಲ್ಲ ಸ್ಟ್ರೈಕ್ ಮಾಡುವಾಗ ನೀವು ಸೇರಿಕೊಳ್ಳಬೇಕು" ಎಂದೆ. "ಏನ್ ಸಾರ್ ಮಾಡೋದು ನಿನ್ನೆಯಲ್ಲ ಸ್ಟ್ರೈಕ್, ಇವತ್ತು ಮಾಡಿಬಿಟ್ರೆ ಹೊಟ್ಟೆಪಾಡು" ಎಂದ.

ಅಯ್ಯಪ್ಪನ ಭಕ್ತನ ಶಿಸ್ತು, ಈ ಆಟೋ ಚಾಲಕನ ಶಿಸ್ತು ಇವೆರಡನ್ನು ನಮ್ಮ ಸಂಸ್ಕೃತಿಯ ಯಾವ ಗುಂಪಿಗೆ ಸೇರಿಸಬೇಕೋ ಗೊತ್ತಿಲ್ಲ.

16-12-83 —ಶೂದ್ರ ಶ್ರೀನಿವಾಸ್

## ಹೊಸ ದಿಗಂತಗಳತ್ತ ಮುನ್ನಡೆ

## ಕರ್ನಾಟಕ ರಾಜ್ಯೋತ್ಸವಕ್ಕೊಂದು ಹೊಸದಿಕ್ಕು

ಕರ್ನಾಟಕ ಜನತೆಯ ಆದರ್ಶ, ಆದೇಶಗಳಿಗೆ ಅನುಸಾರವಾಗಿ. ರಾಜಕೀಯ, ಆರ್ಥಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಸಮಗ್ರ ಸುಧಾರಣೆ ಮಾಡಿ. ಜನಜೀವನದಲ್ಲಿ ಉನ್ನತ ಮೌಲ್ಯಗಳ ಪ್ರತಿಷ್ಠಾಪನೆಗೆ, ರಾಜ್ಯ ಸರ್ಕಾರ ನಿಷ್ಠಾವಂತ, ನಿರಂತರ ಯತ್ನ ನಡೆಸಿದೆ.

○ ಸ್ವಚ್ಛ ನಿರಾಡಂಬರ ಆಡಳಿತ, ಪಕ್ಷಾಂತರ ಪಿಡುಗಿನ ನಿವಾರಣೆಗೆ ಮಸೂದೆ, ಭ್ರಷ್ಟಾಚಾರ ಮೂಲೋತ್ಪಾಟನೆಗೆ 'ಲೋಕ ಆಯುಕ್ತ' ರಚನೆ. ಸಾರ್ವಜನಿಕ ಕುಂದು ಕೊರತೆಗಳ ಶೀಘ್ರ ನಿವಾರಣೆಗೆ ಪ್ರತ್ಯೇಕ ಸಚಿವ ಶಾಖೆ.

○ ನಿಜವಾದ ಆಡಳಿತ ವಿಕೇಂದ್ರೀಕರಣಕ್ಕಾಗಿ ಜಿಲ್ಲಾ ಪರಿಷತ್ತು, ಮಂಡಲ ಪಂಚಾಯಿತಿ ಮತ್ತು ನ್ಯಾಯ ಪಂಚಾಯಿತಿಗಳ ಸ್ಥಾಪನೆಗೆ ವಿಧೇಯಕ ಮಾತು ಕೊಟ್ಟಂತೆ. ನಗರಸಭೆ, ಪುರಸಭೆಗಳಿಗೆ ಚುನಾವಣೆ ನಡೆಸಲಾಗಿದ. ಅದಕ್ಕಾಗಿ ಮತದಾರರ ವಯೋಮಿತಿ 18 ಕ್ಕೆ ಇಳಿಸಿರುವುದೇ ಅಲ್ಲದೆ ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳೆಯರಿಗೆ ಶೇಕಡ 20 ರಷ್ಟು ಸ್ಥಾನ ಮೀಸಲು.

○ ಪ್ರತಿಭಾವಂತ ಹರಿಜನ-ಗಿರಿಜನ ಯುವಕ–ಯುವತಿಯರಿಗೆ ಸರ್ಕಾರದಲ್ಲಿ ಉನ್ನತ ಅಧಿಕಾರಿ ಮಟ್ಟದಲ್ಲಿ ನೇರ ನೇಮಕ ಮಾಡುವ ಅವಕಾಶ ಕಲ್ಪಿಸಲಾಗಿದೆ. ಬಹುಕಾಲದಿಂದ ಆಗದೇ ಇರುವ ಶಿಕ್ಷಣ ವ್ಯವಸ್ಥೆಯ ಸುಧಾರಣೆಗೆ ಸಮಗ್ರ ಮಸೂದೆಯೊಂದು ರಚಿತವಾಗಿದೆ.

○ ಕೇಂದ್ರ ಹಾಗೂ ರಾಜ್ಯ ಸಂಬಂಧಗಳ ಬಗ್ಗೆ ಹೊಸ ಚಿಂತನೆ. ಆಡಳಿತದಲ್ಲಿ ಹೊಸ ವಿಚಾರ ಅಳವಡಿಸಿಕೊಳ್ಳಲು ಆರ್ಥಿಕ ಹಾಗೂ ಯೋಜನಾ ಮಂಡಲಿಗಳ ರಚನೆ.

○ ಪ್ರತಿ ಹಳ್ಳಿಯಲ್ಲಿ ಐದು ಬಡ ಕುಟುಂಬಗಳ ಏಳಿಗೆ ಸಾಧಿಸುವ 'ಅಂತ್ಯೋದಯ' ಯೋಜನೆ.

○ ರೈತರಿಗೆ ಈವರೆಗೆ ಐವತ್ತು ಕೋಟಿ ರೂಪಾಯಿ ರಿಯಾಯಿತಿ ಸೌಕರ್ಯ.

○ 13,500 ಕೊಳವೆ ಬಾವಿಗಳನು ತೋಡಲಾಗಿದೆ. 10,000 ಗ್ರಾಮಗಳಿಗೆ ಕುಡಿಯುವ ನೀರಿನ ಸೌಲಭ್ಯ, 10,000 ಜನಸಂಖ್ಯೆ ಇರುವ ಊರುಗಳಲ್ಲಿ ಅನೌಪಚಾರಿಕ ಪಡಿತರ ವ್ಯವಸ್ಥೆಯ ವಿಸ್ತರಣೆ.

○ ವರದಕ್ಷಿಣೆ ಸಾವು ನೋವು ಪ್ರಕರಣಗಳನ್ನು ಸಿ.ಓ.ಡಿ. ತನಿಖೆಗೆ ಒಪ್ಪಿಸಲಾಗುತ್ತದೆ.

○ ವೃದ್ಧರು ಹಾಗೂ ಅಂಗವಿಕಲರ ಪರಿಹಾರ ವೇತನ ಹೆಚ್ಚಿಸಲಾಗಿದೆ.

**ಜನಮನಸಕ್ಕೆ ಸ್ಪಂದಿಸುವ ಸರ್ಕಾರ - ಕರ್ನಾಟಕ ಸರ್ಕಾರ.**

**ವಾರ್ತಾ ಮತ್ತು ಪ್ರಚಾರ ಇಲಾಖೆ**

**ಕರ್ನಾಟಕ ಸರ್ಕಾರ**

ಪ್ರಕಾಶಕರು :

**ಪ್ರಿಂಟರ್ಸ್ ಪ್ರಕಾಶನ**

75, ಮಹಾತ್ಮ ಗಾಂಧಿ ರಸ್ತೆ

ಬೆಂಗಳೂರು–560 001

ಮಾಲೀಕರು

**ದಿ ಪ್ರಿಂಟರ್ಸ್ (ಮೈಸೂರು) ಲಿಮಿಟೆಡ್**

**ಬೆಂಗಳೂರು-560 001**

L/NP/KRNU/72 No. M (2) PRB 211/73-4

ಜನವರಿ 1984 ರ ಸಂಚಿಕೆಯಲ್ಲಿ

**ಬಿ. ಸಿ. ರಾಮಚಂದ್ರಶರ್ಮ—ರಾಮಚಂದ್ರದೇವ—ವೇದವತಿ**
**ಭಾಸ್ಕರರಾವ್—ಎಸ್. ರಾಜಶೇಖರ್—ಚಲಂ ಬೆನ್ನೂರ್‌ಕರ್—ಚ. ಶಾಳ್ಯ**
**ಅಬ್ದುಲ್‌ಮಜೀದ್‌ಖಾನ್—ಆನಂದಮೂರ್ತಿ—ಲಕ್ಷ್ಮೀನರಸಿಂಹ**
**(ಪಂಜಾಬ್ ಸಮಸ್ಯೆ)—ಪುಸ್ತಕ ವಿಮರ್ಶೆ—ಮೂರನೆಯ ಕಲಾಮೇಳ**
**ಒಡಲಾಳ—ಟಿಪಿಕಲ್ ಟಿ. ಪಿ. ಕೈಲಾಸಂ ಹಾಗೂ ಕನಸಿಗೊಂದು ಕಣ್ಣು**



ಇದರ ಸೃಷ್ಟಿಕರ್ತ—ದೇಶಪಾಂಡೆ

Printed at : Shalivahan Printers, Bangalore-53 Editor & Publisher
M. SRINIVAS